ಗುಂಡ್ಲು ಪಂಡಿತ

ಶ್ರೀ ರಾಜರತ್ನ ಕೃತ

# ಮಹಾಕವಿ ಪುರುಷ ಸರಸ್ವತಿ

ಗ್ರಂಥವನ್ನು

ಶ್ರೀಯುತರು

ಮಂಜೇಶ್ವರದ ಗೋವಿಂದ ಪೈ

ವಿ. ಕೃ. ಗೋಕಾಕ

ಶಿವರಾಮ ಕಾರಂತ

ಎಸ್. ವಿ. ರಂಗಣ್ಣ

ಆರ್. ವಿ. ಜಾಗಿರದಾರ

ಎಲ್. ಎಸ್. ನಾರಾಯಣಶಾಸ್ತ್ರಿ

ದ. ರಾ. ಬೇಂದ್ರೆ

ಇವರ

ಮುನ್ನುಡಿಗಳೊಡನೆ

ಬೆಂಗಳೂರಿನ

ಜಿ. ಪಿ. ರಾಜರತ್ನಂ ಪ್ರಕಟಿಸಿದನು

ಸತ್ಯಶೋಧನ ಪ್ರಕಟಣ ಮಂದಿರ, ಬೆಂಗಳೂರು

ಇವರು ಇದನ್ನು ಮಾರುವರು

ಗುಂಡ್ಲು ಪಂಡಿತ

ಶ್ರೀ ರಾಜರತ್ನ ಕೃತ

# ಮಹಾಕವಿ ಪುರುಷ ಸರಸ್ವತಿ

ಗ್ರಂಥವನ್ನು

ಶ್ರೀಯುತರು

ಮಂಜೇಶ್ವರದ ಗೋವಿಂದ ಪೈ

ವಿ. ಕೃ. ಗೋಕಾಕ

ಶಿವರಾಮ ಕಾರಂತ

ಎಸ್. ವಿ. ರಂಗಣ್ಣ

ಆರ್. ವಿ. ಜಾಗಿರದಾರ

ಎಲ್. ಎಸ್. ನಾರಾಯಣಶಾಸ್ತ್ರಿ

ದ. ರಾ. ಬೇಂದ್ರೆ

ಇವರ

ಮುನ್ನುಡಿಗಳೊಡನೆ

ಬೆಂಗಳೂರಿನ

ಜಿ. ಪಿ. ರಾಜರತ್ನಂ ಪ್ರಕಟಿಸಿದನು

ಸತ್ಯಶೋಧನ ಪ್ರಕಟಣ ಮಂದಿರ, ಬೆಂಗಳೂರು

ಇವರು ಇದನ್ನು ಮಾರುವರು

ಈ ಪುಸ್ತಕದ
ಮೊದಲ ೫೨ ಪುಟ
ಬೆಂಗಳೂರಿನ ಬಿ. ಬಿ. ಡಿ. ಪವರ್ ಪ್ರೆಸ್ಸಿನಲ್ಲೂ
ಕಡೆಯ ೭೨ ಪುಟ
ಮೈಸೂರಿನ ವೆಸ್ಲಿ ಪವರ್ ಪ್ರೆಸ್ಸಿನಲ್ಲೂ
ಪ್ರಿಂಟಾಗಿ, ಬಿ. ಬಿ. ಡಿ. ಪವರ್ ಪ್ರೆಸ್ಸಿನಲ್ಲಿ ಬೈಂಡಾಯಿತು.

ಮಿತ ಸಂಸ್ಕರಣ
ಪ್ರತಿ ೨೫೦ ಮಾತ್ರ



ಬೆಲೆ
ಒಂದೂವರೆ ರೂಪಾಯಿ
(ಜಗನ್ನಿಯಾಮಕನಾದ ಹೆರ್ ಹಿಟ್ಲರನ ಕೃಪೆಯಿಂದ)

೧೯೪೦

# ಬಿನ್ನಹ

ಕನ್ನಡಿಯಂ ತೋಱುದೊಡ |
ತ್ಯುನ್ನತ ಸಲ್ಲಕ್ಷಣಂಗೆ ಮುಳಿಸಾಗದು ಮ ||
ತ್ತೆನ್ನದೆ ಮೂಕೊಱೆಯಂಗಾ |
ಕನ್ನಡಿಯಂ ತೋಱೆ ಬೈಗುಮಿಱುಗುಂ ಕೊಲ್ಗುಂ ||

ಮನುಷ್ಯನನ್ನು ಮೃಗಗಳಿಂದ ಬೇರ್ಪಡಿಸುವ ಹಲವು ವಿಶೇಷ ಗುಣಗಳಲ್ಲಿ ನಗುವೂ ಒಂದು. ಅಕಾರಣವಾಗಿ ಸದಾಕಾಲವೂ ನಗುವ ಬುದ್ಧಿವಿಕಲರನ್ನು ಬಿಟ್ಟರೆ, ಉಳಿದವರ ನಗುವಿಗೆ ಕಾರಣವಿರುತ್ತದೆ: ತಮ್ಮಿಂದ ಇತರರಾದವರ ವೇಷ ಭಾಷೆ ಬದುಕುಗಳಲ್ಲಿ ಕಂಡು ಬರುವ ಅತಿ, ಹಾಗೂ ವಿಕಾರ. ಇತರರ ವಿಕಾರಗಳನ್ನು ನೋಡಿ ನಗುವುದಕ್ಕೆ ವಿಶೇಷರೀತಿಯ ಸಂಸ್ಕಾರವೇನೂ ಬೇಕಾಗಿಲ್ಲ; ಅದು ಹುಂಬನಿಗೂ ಸಹಜವಾದದ್ದು. ಆದರೆ, ತಾನು ಇತರರನ್ನು ಕಂಡು ನಗುವಂತೆ ಇತರರೂ ತನ್ನಲ್ಲಿಯ ವಿಕಾರಗಳನ್ನು ಕಂಡು ನಕ್ಕರೆ, ಆಗ ಆ ನಗುವಿಗೆ ಕೆರಳದಿರಬೇಕಾದರೆ, ಅದಕ್ಕೆ ವಿಶೇಷ ಸಂಸ್ಕಾರ ಬೇಕು. ಅದರಲ್ಲೂ, ತನ್ನ ವಿಕಾರಗಳನ್ನು ಕಂಡು ನಗುವ ಅನ್ಯರೊಡನೆ ತಾನೂ ಒಂದಾಗಿ, ತನ್ನ ವಿಕಾರಗಳಿಂದಾದ ಹಾಸ್ಯವನ್ನು ತಾನೂ ಕಂಡುಕೊಂಡು ನಗಬೇಕಾದರೆ, ಅದಕ್ಕೆ ಬೇಕಾದ ಸಂಸ್ಕಾರ ಅಷ್ಟಿಷ್ಟಲ್ಲ. ಈ ಎರಡೂ ರೀತಿಯ ಸಂಸ್ಕಾರಗಳು ಜನರಲ್ಲಿ ಸುತರಾಂ ಇರುವುದಿಲ್ಲ. ಅದು ಎಷ್ಟು ಬೇಗ ಬಂದರೆ ಅಷ್ಟು ಬೇಗ ನಮ್ಮ ಬದುಕು ಹಸನಾಗುತ್ತದೆ.

ಇತರರಲ್ಲಿ ಕಂಡುಬರುವ ಅತಿಗಳನ್ನೂ ವಿಕಾರಗಳನ್ನೂ ಸಾಹಿತ್ಯದ ಸೊಬಗಿನಿಂದ ತಂದು ತೋರುವ ಪದ್ಧತಿ ಲೋಕದ ಎಲ್ಲಕಡೆಗೂ ಇದೆ. ನಮ್ಮಲ್ಲಿ ಕೂಡ ಸಂಸ್ಕೃತ ಅನ್ಯಾಪದೇಶಗಳೂ ಕನ್ನಡಕಾವ್ಯಗಳ ಕುಕವಿ ನಿಂದೆಗಳೂ ಇದೇ ಜಾತಿಯವು. ಈ ಪದ್ಧತಿ ಹೊಸಕನ್ನಡದಲ್ಲಿ ಹೆಚ್ಚಾಗಿ ತೋರಿಬರದಿದ್ದರೂ ಶ್ರೀ ಕಾರಂತರೂ ಶ್ರೀ ಶ್ರೀರಂಗರೂ ಇದನ್ನು ಬಹುಮಟ್ಟಿಗೆ ಪ್ರಚಾರಕ್ಕೆ ತಂದಿದ್ದಾರೆ. ನನ್ನದಾದರೂ ಈ ಮಾರ್ಗವೇ ಸರಿ. ನಮ್ಮ ಸಾಹಿತ್ಯ ಜೀವನದ ಯಾವ ವಿಕಾರಗಳನ್ನು ಈ ಚಿತ್ರಗಳಲ್ಲಿ ವಿಡಂಬನೆ ಮಾಡಿರುವೆನೆಂಬುದು ಸ್ಪಷ್ಟವಾಗಿಯೇ ಇದೆ. ಈ ಚಿತ್ರಗಳಲ್ಲಿ ಯಾವುದೂ ಯಾವ ವ್ಯಕ್ತಿಗೂ ಅಳತೆಕೊಟ್ಟು ಮಾಡಿಸಿದುದಲ್ಲ. ಹತ್ತಾರುಕಡೆ ಕಂಡು ಬರುವ ಅವಗುಣಗಳನ್ನು ಕಲೆಹಾಕಿ, ಅವಕ್ಕೊಂದು ವ್ಯಕ್ತಿತ್ವವನ್ನು ಕಲ್ಪಿಸಿ, ಆ ವಿಕಾರಗಳನ್ನು ಹಾಸ್ಯಮಾಡಿದ್ದೇನೆ, ಮಾತ್ರ.

ಆದರೆ ಆರು ವರುಷ ಹಿಂದೆ ನನ್ನ 'ತುತ್ತೂರಿ' ಪ್ರಕಟವಾದಾಗ, ಮಕ್ಕಳಿಗಾಗಿ ಬರೆದ 'ಕಾ! ಕಾ! ಕಾ!' ಎಂಬ ಕವಿತೆಯನ್ನು ತಮಗಾಗಿ ಬರೆದ ಅನ್ಯಾಪ

ದೇಶವೆಂದು ಭಾವಿಸಿಕೊಂಡವರುಂಟು; ಮೈಸೂರಿನಲ್ಲಿದ್ದು ಶಿವಮೊಗ್ಗೆಯ ಮುಖ ವನ್ನು ಕಾಣುವ ಮೊದಲು ಬರೆದ "ಬುದ್ವಾದ" ಕವಿತೆಯಿಂದ ಶಿವಮೊಗ್ಗೆಯವ ರೊಬ್ಬರು ಕೆರಳಿದುದು ನನಗಿನ್ನೂ ನೆನಪಿದೆ; ಜಪಾನಿನ 'abstraction' ಎಂಬ ನಾಟಕದ ನೆರಳಾದ ನನ್ನ 'ಕಂಬಳಿಯ ಸೇವೆ' ಯ ಯಜಮಾನರ ಪಾತ್ರವನ್ನು ತಮಗೇ ಅನ್ವಯಿಸಿಕೊಂಡು ನನಗೆ ಶಾಪ ಹಾಕಿದವರೂ ಇದ್ದಾರೆ; ಹೋದ ವರುಷ ನನ್ನ "ಪುರುಷ ಸರಸ್ವತಿ" ಮೊದಲು ಪ್ರಕಟವಾದಾಗ, ಅದರಲ್ಲಿ ತಾವೇ ತಮ್ಮ ಪ್ರತಿಬಿಂಬಗಳನ್ನು ಕಂಡುಕೊಂಡು, 'ತಿರುಗಿಸಬೇಕಾದ ಕಡೆ ತಿರುಗಿಸಿ ನಿನ್ನ ಅನ್ನಕ್ಕೆ ಕಲ್ಲು ಹಾಕುತ್ತೇನೆ', 'ನಾಲ್ಕು ಜನ ತುಂಟರನ್ನು ಛೂಬಿಟ್ಟು ಮೂಳೆ ಮುರಿಸಿದ ರಾಯಿತು' ಎಂದ ಕೆಲವರ ಗರ್ಜನೆ ಇನ್ನೂ ನನ್ನ ಕಿವಿಯಲ್ಲಿದೆ. ಆದ್ದರಿಂದ, ಇಟ್ಟ ಟೋಪಿಯೆಲ್ಲ ನನ್ನ ತಲೆಗೇ ಎಂದು ಎತ್ತಿಕೊಳ್ಳುವವರು ಇರುವತನಕ, 'ಕುಂಬಳ ಕಾಯಿ ಕಳ್ಳ ಎಂದರೆ ಹೆಗಲು ಮುಟ್ಟಿಕೊಂಡ' ಎಂಬ ಗಾದೆಗೆ ಜನ್ಮಭೂಮಿಯಾದ ನಾಡಿನಲ್ಲಿ ಈ ತೆರದ ಸಾಹಿತ್ಯ ಬರೆಯುವವರಿಗೆ ಕೊಂಚ ಅಪಾಯವೇ.

ಆದರೆ ಒಂದು ಸಮಾಧಾನ. ತಮ್ಮ ಕಾಲದ ಧರ್ಮ, ಸಾಹಿತ್ಯ, ಸಮಾಜ ಗಳಲ್ಲಿನ ಕ್ಷುದ್ರಗಳನ್ನು parody, satire, burlesque, caricature, cartoon ಮುಂತಾದ ವಿವಿಧ ಹಾಸ್ಯಪದ್ಧತಿಗಳಿಂದ ಕಳೆಯಲು ಪ್ರಯತ್ನಿಸಿದ ಬೇರೆ ಬೇರೆ ದೇಶದ ಸಾಹಿತಿ ಕಲೆಗಾರರನ್ನು ಆಯಾ ಕ್ಷುದ್ರಗಳಿಗೆ ತಾವೇ ಮೂಲ ವೆಂದುಕೊಂಡವರು ಅನೇಕ ಕಷ್ಟ ನಿಷ್ಟುರಗಳಿಗೆ ಗುರಿಪಡಿಸಿದ್ದಾರೆ. ಪಾಡುಪಡಿಸಿ ದವರು ಹೇಳಹೆಸರಿಲ್ಲದೆ ಹೋಗಿದ್ದರೂ, ಪಾಡುಪಟ್ಟವರ ಹೆಸರು ಇನ್ನೂ ಹಸುರಾಗಿದೆ.

ಈ ರೀತಿಯ ವಿಡಂಬನೆಗಳನ್ನು ವೈಯಕ್ತಿಕವಾಗಿ ಅನ್ವಯಿಸಬಾರದು. ಅದು ಉಭಯತ್ರ ಅನ್ಯಾಯ. ಇಂತಹ ಸಾಹಿತ್ಯದ ಸ್ವರೂಪವೇನು, ಚರಿತ್ರೆ ಯೇನು, ಉದ್ದೇಶವೇನು, ಉಪಯೋಗವೇನು ಎಂಬುದನ್ನು ಜನ ತಿಳಿಯಬೇಕು. ತಿಳಿಯಲು ಬಯಸುವವರು, ಈ ವಿಷಯವನ್ನು ಕುರಿತು ಹಲವರು ಪ್ರಾಜ್ಞರು ನನ್ನ 'ಪುರುಷ ಸರಸ್ವತಿ' ಗೆ ಮುನ್ನುಡಿಯಾಗಿ ಬರೆದಿರುವ ಲೇಖನಗಳನ್ನು ಓದ ಬೇಕೆಂದು ವಿನಯದ ಬಿನ್ನಹ.

೧—೩—೧೯೪೦,
ಬೆಂಗಳೂರು ನಗರ.

ಜಿ. ಪಿ. ರಾಜರತ್ನಂ.

# ಕೃತಜ್ಞತೆ

---

ಈ ಕೃತಿಯನ್ನು ಮೊದಲು
ಪ್ರಕಟಿಸಿದ "ಪ್ರಬುದ್ಧ ಕರ್ಣಾಟಕ" ಪತ್ರಿಕೆಗೂ
ಈಗ ಪುಸ್ತಕ ರೂಪದಲ್ಲಿ ಬಂದ ಇದಕ್ಕೆ
ಮುನ್ನುಡಿಗಳಾಗಿ
ವಿಡಂಬನೆಯನ್ನು ಕುರಿತು ಲೇಖನಗಳನ್ನು
ವಿಶ್ವಾಸದಿಂದ ಬರೆದುಕೊಟ್ಟ
ಗೆಳೆಯರಿಗೂ
ನಾನು ಚಿರಋಣಿ

**— ರಾಜರತ್ನಂ —**

# ವಿವರ

## ಮುನ್ನುಡಿಗಳು



## ಮಹಾಕವಿ ಪುರುಷ ಸರಸ್ವತಿ



---

* ಮುನ್ನುಡಿಯ ಪುಟ ೨೦ರಲ್ಲಿ ಗೆ. ಗೋಕಾಕರು ಸೂಚಿಸಿ ಬಿಟ್ಟಿರುವುದನ್ನು ತುಂಬುವುದಕ್ಕಾಗಿ ಈ ಭಾಗ ಸೇರಿಸಿದೆ.

# ಮುನ್ನುಡಿ

ಮನುಷ್ಯನು ಒಬ್ಬನಿದ್ದಲ್ಲಿ ಇಬ್ಬರಾದಂದಿನಿಂದ ಅಣಕಕ್ಕೆ ಕಣ್ಣು ಕಂಡಿತ್ತು, ಆತನು ಮಾತು ಬಲ್ಲಂದಿನಿಂದ ಮೂದಲಿಗೆ ಬಾಯಿ ಬಂತು. ಆ ಮುಂದೆ ಇತರರು ಆಡಿದುದೊ ಮಾಡಿದುದೊ ತನಗೆ ಹಿಡಿಯದಾದರೆ ಆತನ ಕಟಕಿ ಅವರನ್ನು ಚುಚ್ಚದಿರದು. ಈ ಸೃಷ್ಟಿಯಲ್ಲಿ ಮನುಷ್ಯನು ಎಷ್ಟು ಹಳಬನೊ ಅಣಕವೂ ಅಷ್ಟೇ ಹಳತು. ಅವನ ಸ್ವಭಾವಸಿದ್ಧ ಗುಣಗಳಲ್ಲಿ ಅಣಕವೂ ಒಂದು.

ಮನುಷ್ಯನು ಪರಿಪೂರ್ಣನಲ್ಲ, ಅಪೂರ್ಣನು; ಆದರೆ ಅಪೂರ್ಣನಾದಷ್ಟು ತಾನು ಪರಿಪೂರ್ಣನೆಂಬ ಜಂಬಕ್ಕೆ ಮಾತ್ರ ಅವನು ಎಂದೂ ಈಡು. ಅಪೂರ್ಣತೆಯೂ ಜಂಬವೂ ಅವನಲ್ಲಿ ಇರುವಷ್ಟಕ್ಕೆ ಲೋಕದಲ್ಲಿ ಅಪಚಾರಗಳಿಗೆ ಕಡಿಮೆಯಾಗದು. ಆ ಅಪಚಾರಗಳನ್ನು ಒಗ್ಗದವರು ಅವನ್ನು ಕೆದಕಿ ಬಯಲಿಗೆ ಎಳೆದಿಲ್ಲವಾದರೆ ಅವೇ ಅಂದಂದಿನ ಸೊತ್ತಾಗಿ ಆ ನೆಲೆಯಲ್ಲಿ ಮುಂದುಮುಂದಕ್ಕೂ ಸಾಗುತ್ತಿದ್ದವು. ಒಡವೆಗಳ ಸಾರಾಸಾರವಿಚಾರದಿಂದ ಅವಲ್ಲಿ ಸುಂಕ ಹೊರಿಸದಿದ್ದರೆ ಊರೆಲ್ಲ ಕಳ್ಳೊಡವೆಗಳೇ ತುಂಬುವಂತೆ, ಆಯಾ ಕಾಲದ ಅಪಚಾರಗಳನ್ನು ತಾನೊಲ್ಲೆನೆಂಬ ಸ್ವಾರ್ಥದಿಂದಾಗಲಿ ಅವು ಸಲ್ಲವೆಂಬ ಪರಾರ್ಥದಿಂದಾಗಲಿ ತನ್ನ ಮೂದಲೆಯ ನಿಷ್ಠುರವಾದ ಸುಂಕಕ್ಕೆ ಈಡಾಗಿಸಿ ಜಳ್ಳನ್ನು ಜಾಡಿಸುವ ಅಣಕವು ಬರೇ ಸ್ವಾರ್ಥಸಾಧನವಲ್ಲ ಪರಾರ್ಥವೂ ಅಹುದು, ದೂಷಕವಷ್ಟೇ ಅಲ್ಲ ಪೋಷಕವೂ ಅಹುದು.

ತನ್ನ ಕಣ್ಣಿಗೆ ಬಿದ್ದ ನಗೆಗೇಡನ್ನೂ ಬೀಭತ್ಸವನ್ನೂ ಕಂಡವನು ತಾನೊಲ್ಲೆನೆಂದರೂ ಬಾಯಿಬಿಟ್ಟು ನಗಬೇಕು, ಹೇವದಿಂದ ಮೈಸ್ತೆಗೆಯಬೇಕು. ಆ ನಗುವೂ ಹೇವವೂ ಓಜೆ ತಪ್ಪದೆ ಚೊಕ್ಕ ನುಡಿಗಳಲ್ಲಿ ರೂಪಗೊಂಡರೆ, ಅದೇ ಅಣಕ; ಅದಕ್ಕೆ ನಾಲ್ಕು ಮಂದಿಯನ್ನು ತಲೆದೂಗಿಸತಕ್ಕ ಇನಿದಾದ ಬಣ್ಣವೂ ರುಚಿಯೂ ಸೇರಿದರೆ, ಅದೇ ಅಣಕವಾಡು, ಅದೇ ಅವಗೀತ.

ಪಡುವಣ ಸಾಹಿತ್ಯದಲ್ಲಿ ಪ್ರಾಯಶಃ ಗ್ರೀಕ್ ದೇಶದ ಅರಿಸ್ಟೊಫೆನೀಸ್ (Aristophanes) ಎಂಬವನ ಪ್ರಹಸನಗಳಿಂದಲೂ ಏಸೋಪನ (Aesop) ಕಟ್ಟು ಕಥೆಗಳಿಂದಲೂ ತೊಡಗಿದ ಅಣಕವು ಅಲ್ಲಿ ಸಾಕಷ್ಟು ರೂಢಿಸದೆ, ರೋಮಿನಾಯರಲ್ಲಿ ಹೋರೇಸ್ (Horace), ಜುವೆನಲ್ (Juvenal), ಮಾರ್ಶಲ್ (Martial) ಎಂಬವರ ಅಣಕವಾಡುಗಳಲ್ಲಿ ಮಿಗಿಲಾಗಿ ಇವರ ತ್ರಿಪಥಗಳೇ ಮುಂದೆ ಯೂರೋ

ಪಿನ ಮಿಕ್ಕ ದೇಶಗಳನ್ನು ಹೊಕ್ಕು ಅಲ್ಲಿ ಬೇಕಾದಂತೆ ವ್ಯಾಪಿಸಿದುವು. ಕ್ರಿ. ಶ. ಸು. ೧೪ ನೆಯ ಶತಮಾನದಲ್ಲಿ ಇಂಗ್ಲಾಂಡಿನಲ್ಲಿ ಬೇರೂರಿದ ಅಣಕವಾಡು ಕ್ರಿ. ಶ. ೧೭ ಹಾಗು ೧೮ ನೆಯ ಶತಕಗಳಲ್ಲಿಯ ಡ್ರಾಯ್ಡನ್ನನಿಂದ (Dryden) ಪೋಪನ (Pope) ವರೆಗಣ ಆ ಪ್ರಖ್ಯಾತರಾದ ಹುಟ್ಟಣಕಿಗಳ ಉತ್ಕೃಷ್ಟವಾದ ಹಲವು ಅವ ಗೀತಗಳಲ್ಲಿ ಕೊನೆಮುಟ್ಟಿ, ಆ ಬಳಿಕ ಅವರ ತಕ್ಕಷ್ಟು ಓರಗೆಯ ಬಾಯ್ರನ್ (Byron) ಮುಂತಾದ ಇನ್ನು ಕೆಲವರ ಕವಿತೆಗಳಲ್ಲಿ ಅಂದಂದು ಭುಗಿಲ್ಲೆಂದರೂ ಕ್ರಮೇಣ ಗ್ಲಾನವಾಗಿ ಈಗ ಕಟ್ಟಕಡೆಗೆ ಉಂಟೆಂದರೆ ಉಂಟು ಇಲ್ಲವೆಂದರೆ ಇಲ್ಲ ಎಂಬಂತಿದೆ. ಏವಂಚ ಆಂಗ್ಲ ಸಾಹಿತ್ಯದಲ್ಲಿ ಅದಕ್ಕೆ ಅಂದಿದ್ದ ವೈಶಿಷ್ಟ್ಯವಾಗಲಿ ಸಮ್ಮಾನವಾಗಲಿ ಈಗ ಇಲ್ಲ.

ಅಣಕವಾಡು ಭಾರತೀಯರಿಗೇನೂ ಹೊಸತಲ್ಲ. ಋಗ್ವೇದದಲ್ಲಿ (X·34. ೧–೧೪.) ತನ್ನನ್ನೇ ತನ್ನ ಮೂದಲೆಗೆ ಗುರಿಮಾಡಿಕೊಂಡ ಜೂದಾಳಿಯ ಹಾಡಿದೆ. ಐತರೇಯ ಬ್ರಾಹ್ಮಣದ ಶುನಃಶೇಫನ ಹಾಗೂ ಛಾಂದೋಗ್ಯ ಉಪನಿಷತ್ತಿನ ಸತ್ಯ ಕಾಮ ಜಾಬಾಲನ ಕಥೆಗಳಲ್ಲಿಯ ಕಟಕಿ ಮಾತುಗಳ ಕಿಟಿಕಿಯ ಮರೆಯಾಗಿದ್ದರೆ, ರಾಮಾಯಣದ (ಉದಾ.) ರಾವಣಾಂಗದರ ಸಂವಾದದಲ್ಲಿ ಹಾಗೂ ಮಹಾಭಾರತದ (ಉದಾ.) ಶಿಶುಪಾಲನ ಕೃಷ್ಣನಿಂದೆಯಲ್ಲಿ ಮೂದಲೆ ಬೀದಿವರಿಯುತ್ತಿದೆ. ಆ ಮುಂದಣ ಸಂಸ್ಕೃತ ಸಾಹಿತ್ಯದಲ್ಲಿ ಅಲ್ಲಲ್ಲಿ ಪಸರಿಸಿರುವ ಅಣಕವು ಬೇಕಾದಷ್ಟಿದೆ ಮಾತ್ರವಲ್ಲ, ಕೆಲವು ಅಲಂಕಾರಗಳ ಸೋಗಿನಿಂದಲೂ ನೆಲಸಿದೆ. ಕವಿರಾಜಮಾರ್ಗ ದಿಂದ ಮೊದಲ್ಗೊಂಡು ಎಲ್ಲವೆಂಬಂತೆ ಕನ್ನಡ ಕಾವ್ಯಗಳ ಪೀಠಿಕೆಯಲ್ಲಿಯ ಕುಕವಿಗಳ ಇತ್ಯಾದಿ ನಿಂದೆಯಲ್ಲಿಯೂ ಸಮಯೋಚಿತವಾಗಿ ಅಲ್ಲಲ್ಲಿ ಅನೇಕ ಕಾವ್ಯಗಳ ಶರೀರ ದಲ್ಲಿಯೂ ಮೂದಲೆಗೇನೂ ಕೊರತೆ ಇಲ್ಲ. ಸರ್ವಜ್ಞನ ತ್ರಿಪದಿಗಳಲ್ಲಂತೂ ಅಣ ಕದ ಭಂಡಾರವನ್ನೇ ಸೂರೆಬಿಟ್ಟದೆ.

ಈ ಕೃತಿ ಶ್ರೀ ರಾಜರತ್ನರ ಅಣಕವಾಡು, ಅಥವಾ ಅವರೆಂದಿರುವಂತೆ ತುರುಚುಗಬ್ಬ. ಇದು ಹಿಂದಣ ಅಣಕವಾಡುಗಳಿಗೆ ಓರಂತೆ ಇದೆಯೊ ಎಂಬ ಪ್ರಶ್ನೆ ಏಳದು. ಏಕೆಂದರೆ ಅಣಕವಾಡಿಗೆ ಇತ್ಥಂವಿಧವೇ ಎಂಬ ಚೌಕಟ್ಟು ಇಲ್ಲ, ಅದು ವಿಷಯಾಂತರಕ್ಕೆ ಹಿಡಿವಂತೆ ರೂಪಾಂತರಿಸಬಹುದು. ಅದು ಸಾಹಿತ್ಯವೆನಿಸು ವಂತೆ ಅದಕ್ಕೆ ಇಲ್ಲದೆ ಸಲ್ಲದೆಂದರೆ ರೂಪ ಮತ್ತು ರಸ; ರೂಪಹೀನವಾದ ಅಣಕ ವಾಡು ನಾಡಾಡಿಗಳ ಜರೆದಾಟ, ರಸ ಹೀನವಾದರೆ ಬರೀ ಕೊರಚಾಟ.

ತನ್ನ ಕೃತಿಗಳು ತಾನು ಕೆಣಕಿಸಲ್ಪಟ್ಟಂದು ಆದಂತೆ ತಾನು ಮೆಯ್ತುಂಬಿ ದಂದು ಆದುವಲ್ಲ ಎಂಬರು ರಾಜರತ್ನರು. ಸರಿ, ಆ ಕೆಣಕವೇ ಅವರನ್ನು ಈಗ ಅಣಕಿಯಾಗಿಸಿದೆ. ಹಾಗೆ ಕೆಣಕಿಸಲ್ಪಟ್ಟಿಲ್ಲವಾದರೆ, ಈಗಣ ಕನ್ನಡ ಸಾಹಿತ್ಯದಲ್ಲಿ

ಮೊದಲೆಯ ಇದೊಂದು ಹೊಸದಾರಿಯನ್ನು ಇವರು ಅಗೆಯುತ್ತಿದ್ದರೋ ಇಲ್ಲವೇನೋ.

ಕನ್ನಡದಷ್ಟೇ ಬಾಳಬಲ್ಲ ಯೆಂಡಕುಡ್ಕರತ್ನನನ್ನು ಕನ್ನಡದಲ್ಲಿ ಸೃಷ್ಟಿಸಿದ ರಾಜರತ್ನರನ್ನು ನಾನು ಕನ್ನಡ ಸಾಹಿತ್ಯದ ಬೊದಲೈರ್ (Baudelaire) ಕವಿ ಎಂದು ಬಗೆದಿದ್ದೇನೆ. ಫ್ರೆಂಚ್ ಸಾಹಿತ್ಯದಲ್ಲಿ ಅವನ 'ಕೆಡುಕಿನ ಹೂವುಗಳು' (Flowers of the Evil) ಎಷ್ಟೋ ಕನ್ನಡದಲ್ಲಿ ಅಷ್ಟೇ ಸೊಗಸು ಇವರ ಯೆಂಡಕುಡ್ಕ ರತ್ನ ಮತ್ತು ರತ್ನನ ಪದಗಳು. ಯೆಂಡಕುಡ್ಕ ರತ್ನನನ್ನು ಕೆತ್ತಿದ ಕೆಯ್ಗೆ ಪುರುಷಸರಸ್ವತಿಯನ್ನು ಮೆತ್ತಲಿಕ್ಕೆ ಮತ್ತೆ ಪ್ರಯಾಸವಿಲ್ಲ.

ರಾಜರತ್ನರಿಗೆ ತಾನು ಮುಟ್ಟಿದುದನ್ನು ನವಾಯಿಸುವ ಕೆಯ್ಗುಣವಿದೆ; ಅವರ ಬರೆಹದಲ್ಲಿ ಅಲ್ಲಲ್ಲಾದರೂ ಜಗಳಕ್ಕೆ ಇಂಬಾಗುವ ಆದೊಂದು (ಅವ?)ಗುಣವೂ ಇದೆ. ಈ ಲಕ್ಷಣಗಳು ಇದ್ದಿಲ್ಲವಾದರೆ, ಕನ್ನಡದಲ್ಲಿ ಇಂದು ಯೆಂಡಕುಡ್ಕ ರತ್ನನು ಇರುತ್ತಿದ್ದಿಲ್ಲ, ಪುರುಷಸರಸ್ವತಿ ಬರುತ್ತಿದ್ದಿಲ್ಲ.

ಈ ಕವಿತೆ ಯಾವ ಪಾಕವೊ (ಅಥವಾ ಶಾಕವೊ) ವಿಮರ್ಶಕರು ಇನ್ನು ನಿಶ್ಚಯಿಸಬೇಕು. ಮೇಲಿಂದ ಮೇಲೆ ಹೇಳುವುದಾದರೆ ಇದನ್ನು ತತ್ಕಾಲಕ್ಕೆ ಹಾಗಲಕಾಯಿಯ ಶಾಕವೆನ್ನಬಹುದು. ಕಹಿ ಎಂದೇ ರುಚಿ, ಕಹಿ ಎಂದೇ ಪಥ್ಯವೆನಿಸುವ ಹಾಗಲಕಾಯಿಯನ್ನು ಮಿಕ್ಕ ಸಂಬಾರದಿಂದ ಒಗ್ಗರಿಸಿದ ಶಾಕದಲ್ಲಿ ಕಹಿಗೆ ಕಹಿಯೂ ಉಳಿದು ಶಾಕವು ಪಥ್ಯಕ್ಕೂ ಪಥ್ಯ, ರುಚಿಗೂ ರುಚಿ. ಆದರೆ ಇವರೇಕೋ ಮಣಿಪ್ರವಾಳಕ್ಕೆ ಮನಸೋತು ಈ ಕೃತಿಯಲ್ಲಿ ಹೇರಿರುವ ಇಂಗ್ಲಿಷು ಮಾತುಗಳಾದರೊ ಇದನ್ನು ರುಚಿಗೆಡಿಸವೆಂದು ಮಾತ್ರ ನಂಬಲಾರೆ.

ಮಂಜೇಶ್ವರ<br>೧೦ ಸಪ್ತಂಬರ ೧೯೩೪

ಗೋವಿಂದ ಪೈ.

## ಹಾಸ್ಯ-ವಿಡಂಬನೆ

§ ೧

ಹಾಸ್ಯ(comic laughter)ದ ಬೇರೆ ಬೇರೆ ಪ್ರಕಾರಗಳಲ್ಲಿ ವಿಡಂಬನೆ (satire)ಯೊಂದಾಗಿದೆ. ಸಮಗಾಗದವರನ್ನು, ನಮ್ಮ ತತ್ವಗಳಿಗೆ ಹೊರತಾದವರನ್ನು ಇಲ್ಲವೆ ನಮ್ಮ ಶತ್ರುಗಳನ್ನು ವಾಗ್ಯುದ್ಧದಲ್ಲಿ ಇಲ್ಲವೆ ತಾತ್ವಿಕ ಸಂಗ್ರಾಮದಲ್ಲಿ ಹೊಡೆದೋಡಿಸುವ ಆಯುಧವೆಂದರೆ ವಿಡಂಬನೆಯೇ ಸರಿ. ವ್ಯಕ್ತಿಯೇ ಆಗಲಿ ಸಂಸ್ಥೆಯೇ ಆಗಲಿ—ಸಮಾಜಕ್ಕೆ ಅಪಾಯವಾದರೆ ತೀರತು,—ವಿಡಂಬನಕಾರನು ತನ್ನ ನಗೆಯಿಂದ ಅವುಗಳನ್ನು ಕೊಲ್ಲುತ್ತಾನೆ, ಇಲ್ಲದಿದ್ದರೆ ನಗೆಯಲ್ಲಿ ಸಂತಾಪವನ್ನು ಬೆರೆಸಿ ಸುಟ್ಟುಬಿಡುತ್ತಾನೆ. ಯಜ್ಞಪಶುವನ್ನು ಕೊಲ್ಲಲು ರೋಷದ ಅಗ್ನ್ಯಸ್ತ್ರವೇಕೆ, ಲೀಲಾಮಾತ್ರವಾಗಿಯೇ ಇದರ ಅವತಾರವನ್ನು ಮುಗಿಸುವೆನೆಂಬ ಹುಮ್ಮಸ್ಸು ವಿಡಂಬನಕಾರನಿಗಿರುತ್ತದೆ. ಅಂತೇ ಸಿಟ್ಟಿಗಿಂತ ಹೆಚ್ಚಾಗಿ ಅವನ ನಗೆಯು ತೀಕ್ಷ್ಣವಾಗಿರುತ್ತದೆ. "ಲಂಡನ್ನಿನಲ್ಲಿರುವಾಗ ನನ್ನ ಉಗುರನ್ನು ಸ್ವಚ್ಛವಾಗಿಡುವುದೇ ಆಗುವುದಿಲ್ಲ" ಎಂದು ನಾಲ್ಕು ಮಂದಿಯೆದುರಿಗೆ ಚಡಪಡಿಸುತ್ತಿದ್ದ ಹೆಣ್ಣುಮಗಳನ್ನು ಕುರಿತು: "ಅದೇಕೋ ಕಾಣೆ, ತಾಯಿ. ಬಹುಶಃ ತಾವು ತಮ್ಮ ಮೈಯನ್ನು ತುರಿಸಿಕೊಳ್ಳುತ್ತಿರಬೇಕು" ಎಂದು ಒಬ್ಬ ನಾಮಾಂಕಿತ ಆಂಗ್ಲ ಸಾಹಿತಿಯು ನುಡಿದನಂತೆ! ಇದೇ ವಿಡಂಬನೆ, 'ತುರುಚುಗಬ್ಬ'!

ವಿಡಂಬನೆಯ ಉದ್ದೇಶವೇನೆಂದರೆ—ಸಮಾಜದ ಸ್ವಾಸ್ಥ್ಯವನ್ನು ಕಾಯಲು ಡಾಂಭಿಕತನವನ್ನು ಬೈಲಿಗೆಳೆಯುವುದು; ದುರ್ಗುಣಗಳ ದುಷ್ಪರಿಣಾಮಗಳಿಗೆ ರಾವುಗನ್ನಡಿಯನ್ನು ಹಿಡಿದು ದುರ್ಜನರನ್ನು ತಿದ್ದುವುದು; ಮೂರ್ಖತನವನ್ನು ಎತ್ತಿ ಹಿಡಿದು ತೋರಿಸುವುದು. ವಿಡಂಬನಕಾರನು ಇದನ್ನೆಲ್ಲ ವಿನೋದದ ದ್ವಾರವಾಗಿಯೇ ಕೊನೆಗಾಣಿಸಲು ಪ್ರಯತ್ನಿಸುತ್ತಾನೆ. ಹಂಬರ್ಟ್ ವೂಲ್ಫ್ ಎಂಬ ವಿಮರ್ಶಕನೆಂದಂತೆ,—ವಿಡಂಬನಕಾರನು ಉಪದೇಶಕನ ಉದ್ದೇಶಗಳಿಗೆ ನಗೆಗಾರನ ಆಯುಧಗಳನ್ನು ಒದಗಿಸಿಕೊಡುತ್ತಾನೆ. ಅವನ ಉದ್ದೇಶಗಳಿಗೆ ಪ್ರಾಮುಖ್ಯವನ್ನು ಕಲ್ಪಿಸಿ ಮೆರೆಡಿಥ್ ಎಂಬವನು ಹೇಳುವ ಮಾತಿದು: "ಬೆನ್ನೆಲುಬಿನ ಮೇಲಾಗಲಿ ಇಲ್ಲವೆ ಮೋರೆಯ ಮೇಲಾಗಲಿ ಕೊಟ್ಟ ಹೊಡೆತವೇ ವಿಡಂಬನೆ. ವಿಡಂಬನಕಾರನೆಂದರೆ ನೀತಿವಂತರ ಏಜೆಂಟ, ಸಮಾಜದ ಮಾನಸಿಕ ಜಗತ್ತಿನ ಜಲಗಾರ ಇಲ್ಲವೆ 'ಭಂಗಿ'!" ನ್ಯಾಯಬುದ್ಧಿ ಹಾಗು ಕಲಾವಂತಿಕೆಗಳ ಸಮ್ಮಿಲನದಿಂದ ವಿಡಂಬನವು ಹುಟ್ಟುತ್ತದೆ.

ವಿಡಂಬನೆಯೆಂದರೆ ಬರಿ ಭೂಮುದ ಹಾಡಲ್ಲ, ಬೀಭತ್ಸವಲ್ಲ, ಬರಿ ಸಿಟ್ಟಿನ ರಗಳೆಯಲ್ಲ. ಸಿಟ್ಟಿನೊಡನೆ ಸ್ವಾಭಿಮಾನವನ್ನೂ ತುಸು ವಿನೋದವನ್ನೂ ಕೂಡಿಸಿದಾಗ ಹುಟ್ಟಿಬರುವ ಅಪಹಾಸ(ridicule)ವಲ್ಲ. ವಿಡಂಬನೆಯು ಅಣಕಕ್ಕೆ ಸಮೀಪವಾಗಿದ್ದರೂ ಅದರಲ್ಲಿ ವಿನೋದದ ಅಂಶವು ಇನ್ನೂ ಹೆಚ್ಚಾಗಿರುತ್ತದೆ; ಸಾತ್ವಿಕ ಕೋಪವೂ ಸಹ ತಕ್ಕಮಟ್ಟಿಗೆ ಕೂಡಿರುತ್ತದೆ; ಸ್ವಾಭಿಮಾನವು ಮಾತ್ರ ಅದೃಶ್ಯವಾಗಿ ಬಂದು ನೆಲೆಸಿರುತ್ತದೆ. ವಿನೋದ, ಸ್ವಾಭಿಮಾನ, ಕೋಪ, ಈ ಮೂರರ ವಿಶಿಷ್ಟ ಸಮ್ಮಿಶ್ರಣದ ಮೇಲೆ ವಿಡಂಬನೆಯ ಸ್ವಭಾವಗುಣದ ನಿರ್ಣಯವಾಗುತ್ತದೆ.

§ ೨

ಈ ಮೂರು ಗುಣಗಳು ಮುಪ್ಪುರಿಗೊಂಡು ಸಿದ್ಧವಾದ ವಿಡಂಬನೆಯು ಸಾಹಿತ್ಯರೂಪಕ್ಕೆ ಇಳಿಯಬೇಕಾದರೆ ಅದು ರಸಸಿದ್ಧಿಯನ್ನು ಹೊಂದಿರಬೇಕು. ಕಾವ್ಯದ ಆತ್ಮವಾದ ಧ್ವನಿಯಾಗಲಿ, ಕಿರಿದರಲ್ಲಿ ಹಿರಿದನ್ನು ಹೇಳುವ ಸಾಮರ್ಥ್ಯವಾಗಲಿ ಅದಕ್ಕೆ ಬಂದಿರಬೇಕು. ಮೇಲೆ ಹೇಳಿದ ಸಮ್ಮಿಶ್ರಣಕ್ಕೆ ರಸದೀಕ್ಷೆಯನ್ನು ಕೊಡಲು ವಿಡಂಬನಕಾರನು ಹಾಸ್ಯದ ಬೇರೆ ಬೇರೆ ಪ್ರಕಾರಗಳನ್ನು ಉಪಯೋಗಿಸುತ್ತಾನೆ. ವಿನೋದಿಯು ಮಾತ್ರ ಮಾನವರ ದೌರ್ಬಲ್ಯಗಳನ್ನು ನೋಡಿ ಮರುಗುತ್ತಾನೆ; ಸಿಟ್ಟಾಗುವುದಿಲ್ಲ. ತನ್ನಲ್ಲಿಯೂ ಇಂತಹ ದೌರ್ಬಲ್ಯಗಳು ಮನೆ ಮಾಡಿಕೊಂಡಿರುವುವೆಂಬುದು ಅವನಿಗೆ ಚೆನ್ನಾಗಿ ಗೊತ್ತಿರುತ್ತದೆ. ಪೂರ್ಣತೆಗೂ ಮಾನವೀಯ ಅಪೂರ್ಣತೆಗೂ ಇರುವ ಅಂತರವು ಲೆಕ್ಕವಿಲ್ಲದಷ್ಟು ಸನ್ನಿವೇಶಗಳಲ್ಲಿ ಅವನ ಕಣ್ಣಿಗೆ ಬೀಳುತ್ತದೆ. ಅವುಗಳನ್ನು ಕಂಡು ಸಿಟ್ಟಾಗದೆ ಅವನು ಸಹಾನುಭೂತಿಯನ್ನು ತೋರಿಸುತ್ತಾನೆ, ಕರುಣೆಯಿಂದ ಅಪರಾಧಿಯ ಹೃದಯವನ್ನು ಕೂಡ ಮುಟ್ಟುತ್ತಾನೆ. ಆದರೆ ಅಪೂರ್ಣತೆಯನ್ನು ಕಂಡಾಗ ಬರುವ ನಗುವನ್ನೂ ಅವನು ತಡೆಯುವುದಿಲ್ಲ. ಹೀಗೆ ನಗೆ, ಕರುಣೆ ಮತ್ತು ಸರಸ ಸಜ್ಜನಿಕೆಗಳ ಸಮ್ಮಿಲನವೇ ವಿನೋದಿಯಲ್ಲಿ ಕಂಡುಬರುತ್ತದೆ. ವಿದಗ್ಧತೆಯು (wit) ಇದಕ್ಕಿಂತ ತುಸು ಬೇರೆಯಾಗಿದೆ. ಅಸಾಮಾನ್ಯವಾದ ಅನುಭವ, ಹಾಗು ಕಿರಿದರಲ್ಲಿ ಎಲ್ಲವನ್ನೂ ಹೇಳುವ ಹವಣಿಕೆ,—ಇವುಗಳ ಜೋಡಣೆಯಿಂದ ಉಂಟಾದ ಹಾಸ್ಯವನ್ನೇ ನಾವು ವಿದಗ್ಧತೆಯೆಂದು ಕರೆದಿದ್ದೇವೆ. ಕೇಳುವವರನ್ನೆ ಅಚ್ಚರಿಗೊಳಿಸುವಂತೆ ಇದರಲ್ಲಿ ಬುದ್ಧಿ ಕೌಶಲ್ಯವು ಲೀಲಾಮಾತ್ರವಾಗಿ ಪ್ರಕಟವಾಗುವುದು. ಯಾರಿಗೂ ಕಾಣದ ಸಾಮ್ಯ-ವೈಷಮ್ಯಗಳೂ ಶಬ್ದಸೃಷ್ಟಿಯೂ ಎಲ್ಲ ವೈಚಿತ್ರ್ಯಗಳೂ ಮಾತಿನ ಮಲ್ಲನಿಗೆ ಕಂಡು ಬರುತ್ತವೆ. ವಿದಗ್ಧತೆಯನ್ನು ನಿರೂಪಿಸುವ ಚತುರೋಕ್ತಿಯೇ ಸುಭಾಷಿತ (witty writing).

ಅಣಕ(parody)ವೂ ಹಾಸ್ಯದ ಒಂದು ಪ್ರಕಾರವಾಗಿದೆ. ವಿಕೃತ ವರ್ಣನೆಯು ಇಲ್ಲವೆ ನಿರೂಪಣೆಯು ಎರಡು ತರಹದ್ದಾಗಬಹುದು,—(೧) ಅತಿಶಯೋಕ್ತಿಯುಳ್ಳದ್ದು. (೨) ಇರುವದಕ್ಕಿಂತ ಕಡಿಮೆಯೆಂದು ತೋರಿಸುವ ರೀತಿಯದು. ಅತಿಶಯೋಕ್ತಿಯೇ ಅಣಕದ ಜೀವಾಳವಾಗಿದೆ; ಸಾಹಿತ್ಯದ ದೋಷಗಳನ್ನು ಇಲ್ಲವೆ ತಾತ್ತ್ವಿಕ ಕುಂದು ಕೊರತೆಗಳನ್ನು ಸಾತಿಶಯವಾದ ಅನುಕರಣದ ಮೂಲಕ ಎತ್ತಿ ತೋರಿಸುವ ವಿಧಾನವೇ ಅಣಕವಲ್ಲವೆ? ನಗೆ, ಮೂಲಕೃತಿಯ ಬಗ್ಗೆ ಆದರ ಹಾಗೂ ಭಕ್ತಿ—ಇವು ಅಣಕಗಬ್ಬದಲ್ಲಿ ಇರಬೇಕಾದ ಗುಣಗಳಾಗಿವೆ. ತೀರ ಸಾಮಾನ್ಯವಾದುದನ್ನು ಅಸಾಧ್ಯವಾಗಿ ಅಲಂಕೃತವಾದ ಭಾಷೆ ರೀತಿಗಳಲ್ಲಿ ನಿರೂಪಿಸಿ ನಗಿಸುವ ಕೃತಕ ಗಂಭೀರ (mock-heroic) ಸಾಹಿತ್ಯವೂ ಇದೇ ಜಾತಿಯದೆಂದು ತಿಳಿಯಬಹುದು. ಮೂಲವು ತಿಳಿಯುದಷ್ಟು ಅನುಕರಣವು ವಿಕೃತವಾದಾಗ—ಇಲ್ಲವೆ ಅನುಕರಣದ ಸಹಾಯ ಅಷ್ಟೊಂದಿಲ್ಲದೆ ಕುಂದುಕೊರತೆಗಳನ್ನು ಚೇಷ್ಟೆಯಿಂದ ಬಯಲಿಗೆಳೆದಾಗ ಸಂಭವಿಸುವ ಸಾಹಿತ್ಯಕ್ಕೆ Burlesque ಎಂದು ಹೇಳುತ್ತಾರೆ. ಇದನ್ನು ನಾವು ವಿಕಟಾನುಕರಣವೆಂದು ಕರೆಯಬಹುದು.

ಗಜರಗಳೆಯೂ (nonsense) ಹಾಸ್ಯಪ್ರೇರಕವಾಗುವ ಅತಿಶಯೋಕ್ತಿಗಳಲ್ಲಿ ಒಂದಾಗಿದೆ. ಅರ್ಥವ್ಯಕ್ತಿಯು ಒದಗುವದೆಂದು ಆಸೆ ಹುಟ್ಟಿಸಿ ಅರ್ಥವನ್ನೇ ತರದೆ ನಮ್ಮಲ್ಲಿ ಸಂತೋಷ ಹುಟ್ಟಿಸುವ ರೀತಿಯೇ ಅರ್ಥಶೂನ್ಯತೆ ಇಲ್ಲವೆ ಗಜರಗಳೆ. ಇದರಲ್ಲಿ ಎರಡು ಪ್ರಕಾರಗಳನ್ನು ಮಾಡಬಹುದು: (೧) ಸಂಪೂರ್ಣವಾಗಿ ಅರ್ಥಹೀನವಾದ ವಿಧಾನ. ಇದನ್ನು ವೆಂಕ–ನಾಣ–ಸೀನರ ಕಥೆಯಲ್ಲಿ ಕಾಣಬಹುದು. "ಸಮುದ್ರಕ್ಕೆ ಬೆಂಕಿ ಹತ್ತಿದರೆ ಮೀನುಗಳೇನು ಮಾಡುತ್ತವೆ?" ಎಂದು ಕೇಳಿದ ಪ್ರಶ್ನೆಗೆ "ಮರಗಳನ್ನೇರುತ್ತವೆ" ಎಂದು ಉತ್ತರ ಬಂತಂತೆ! (೨) ಬೇರೆಯೊಂದು ಅರ್ಥವನ್ನು ಹೊರಡಿಸುವ ಅರ್ಥಶೂನ್ಯತೆ. ಇಲ್ಲಿ ಆರ್ಟೆಮಸ್ ವಾರ್ಡ್ ಎಂಬ ಅಮೇರಿಕನ್ ವಿನೋದಿಯು ಜೆಫ್ ಡೇವಿಸ್ ಎಂಬ ಬಡವನ ಬಗ್ಗೆ ಹೇಳಿದ ಮಾತನ್ನು ನೆನೆಯಬಹುದು: "ಆತನು ಎಂದೆಂದಿಗೂ ಹುಟ್ಟದಿರಬೇಕಿತ್ತು. ಅಂದಾದರೂ ಅವನ ಕಿಸೆಯಲ್ಲಿ ಹತ್ತೆಂಟು ಡಾಲರುಗಳು ಆಡಬಹುದಾಗಿತ್ತು."

ವ್ಯಂಗ್ಯೋಕ್ತಿಯು (irony) ಹಾಸ್ಯದ ಇನ್ನೊಂದು ವಿಧ. ಇದರ ರೀತಿ ಬೇರೆ. ಒರ್ವ ವ್ಯಕ್ತಿ ಇಲ್ಲವೆ ಸಂಸ್ಥೆಯನ್ನು ಕೀಳುಗೆಯ್ಯುವ ಉದ್ದೇಶವಿದ್ದರೂ ವ್ಯಂಗ್ಯೋಕ್ತಿಕಾರನು ಹಾಗೆ ನೇರವಾಗಿ ಮಾಡುವುದಿಲ್ಲ; ನಿಷ್ಪಕ್ಷಪಾತ ಬುದ್ಧಿಯ ಸೋಗು ಹಾಕಿ ವ್ಯಂಗ್ಯವಾಗಿ ಮಾತನಾಡುತ್ತಾನೆ. ವ್ಯಂಗ್ಯೋಕ್ತಿಯೂ ಕೊಂಕುನುಡಿಯೂ ಒಂದಕ್ಕೊಂದು ಬಹಳ ಸಮೀಪವಾಗಿರುತ್ತವೆ. ಒಮ್ಮೊಮ್ಮೆ ವಿಂಗಡಿಸಲಿಕ್ಕೆ ಬರದಷ್ಟು ಸಮೀಪವಾಗಿರುತ್ತವೆ. ಯುದ್ಧಕ್ಕೆ ಹೊರಟ ಉತ್ತರಕುಮಾರನನ್ನು ನಾರಿಯರು ಸ್ತುತಿಸುವ ರೀತಿಯಿದು; ವ್ಯಂಗ್ಯೋಕ್ತಿಯೆನ್ನಬಹುದು.

"ವೀರಕುವರವಿಭಾಡ ರಾಯಕು
ಮಾರಮಸ್ತಕಶೂಲ ವೈರಿಕು
ಮಾರಕೇಸರಿ ರಾಯರೆದೆದಲ್ಲಣದ ನಿಶ್ಶಂಕ।
ಧೀರಕುವರಕುಠಾರ ಮಲ್ಲಕು
ಮಾರಗಿರಿವಜ್ರಾಯೆನಲು ತಾ
ನಾರಿಯರ ಬಿರುದಿನ ನುಡಿಯ ಕೇಳಿಯಲಿ ಪೊಱವಂಟ॥"

**ಕೊಂಕುನುಡಿ**(sarcasm)ಯೆಂದರೆ ಸ್ತುತಿಸುವ ನೆವಮಾಡಿ ಕುಂದು ಕೊರತೆಗಳನ್ನು ಬಯಲಿಗೆಳೆಯುವುದು. ಇಂಥ ವಿಮರ್ಶೆಯು ಸೂಚ್ಯವಾಗುವಷ್ಟು ಅತಿಶಯೋಕ್ತಿಯು ಕೊಂಕುನುಡಿಯಲ್ಲಿರಬೇಕಾಗುವುದು.

"ಉಸುರಲಾಗದು ನಿನ್ನ ಹರಿಬಕೆ
ಮಿಸುಕುವವರಾವಲ್ಲ ಹೆಂಡಿರ
ಗಸಣಿಗೊಂಬವರಲ್ಲ ಹುದುವಿನ ಗಂಡುತನವಿದನು।
ಶಶಿವದನೆ ಸುಡು ಕಷ್ಟವೀಯುಪ
ದೆಸೆಯುವರು ನಾವಲ್ಲ ನಿನ್ನವ
ರಸಮಸಾಹಸರುಱಿದ ನಾಲ್ವರಿಗಱುಹು ಹೋಗೆಂದ॥"

ಇಲ್ಲಿ ಕುಮಾರವ್ಯಾಸನು ನಿರ್ಮಿಸಿದ ಭೀಮನು ಧರ್ಮಾದಿಗಳನ್ನು ಸ್ತುತಿಸುವ ನೆವದಿಂದ ಅವರನ್ನು ಬಲವಾಗಿ ಟೀಕಿಸುತ್ತಾನೆ!

ನಿರ್ಭತ್ಸನ(invective)ದಲ್ಲಿ ಹಾಸ್ಯವು ಬಹುತೇಕ ಮಾಯವಾಗಿ ಹೋಗಿರುತ್ತದೆ. ಯಾವುದಾದರೊಂದು ಮಾತಿನಲ್ಲಿ ಘಟಿಸಿ ಬಂದ ತಪ್ಪನ್ನು ಜನರೆದುರಿಗೆ ಹೊರಗೆಡಹುವದೇ ಇದರ ಉದ್ದೇಶವಾಗಿದೆ. ಕೊಳಕನ (cynic) ಕೊಳಕು ಮಾತುಗಳ ರೀತಿ ಬೇರೆ. ಜಗತ್ತಿನಲ್ಲಿ ಆನಂದವೆಂಬುದಾಗಲಿ ಮನುಷ್ಯಸ್ವಭಾವದಲ್ಲಿ ಒಳ್ಳೆಯದೆಂಬುದಾಗಲಿ ಇಲ್ಲವೇ ಇಲ್ಲವೆಂಬುದು ಅವನ ತಿಳುವಳಿಕೆಗಾಗಿಬಿಟ್ಟಿರುತ್ತದೆ. ಹುಳುಕುಗಳನ್ನು ತಿರಸ್ಕಾರಪೂರ್ವಕವಾಗಿ ಕಂಡುಹಿಡಿದು ಅಪಹಾಸ್ಯಕ್ಕೀಡುಮಾಡುವದೆ ಅವನ ಉದ್ಯೋಗವಾಗಿರುತ್ತದೆ. ದುಃಖಗಳನ್ನು ಅನುಭವಿಸಿ ಸಣ್ಣಾಗುತ್ತ ನಡೆದ ಮಾನವನು ನಿರಾಶಾವಾದಿಯೂ (pessimist) ಮಾನವದ್ವೇಷಿಯೂ (misanthrope) ಆಗುತ್ತಾನೆ. 'ಬೇವಿನಮರವು' ಬಲಿತಷ್ಟು ಕಹಿಯಾಗುವಂತೆ ಇಂತಹ ವ್ಯಕ್ತಿಯ ಮನಸ್ಸು ಹೆಚ್ಚುಹೆಚ್ಚು ಕಹಿಯಾಗುತ್ತ ಹೋಗುತ್ತದೆ. ಅವನ ವ್ಯಾಕುಲತೆಯ ನಿರೂಪಣೆಯನ್ನೇ ನಾವು ಕಹಿಮಾತೆಂದು (the sardonic) ಕರೆಯಬಹುದು.

ವಿಡಂಬನೆಗೆ ಸಂಬಂಧಿಸಿದ ಸ್ವಭಾವಗುಣಗಳ ಹಾಗು ಸಾಹಿತ್ಯಗುಣಗಳ ಸ್ವರೂಪವನ್ನು ಮೇಲೆ ಹೇಳಿದಂತೆ ನಾವು ನಿರ್ಣಯಿಸಬಹುದು.

§ ೩

ವಿನೋದ, ವಿದಗ್ಧತೆ, ಚಣಕ, ಕೃತಕಗಾಂಭೀರ್ಯ, ವಿಕಟಾನುಕರಣ, ವ್ಯಂಗ್ಯೋಕ್ತಿ, ಕೊಂಕುನುಡಿ, ನಿರ್ಭರ್ತ್ಸನ, ಕೊಳಕುಮಾತು, ಕಹಿಮಾತು,—ಇವೆಲ್ಲ ವಿಡಂಬನಕಾರನು ಉಪಯೋಗಿಸುವ ಸಾಧನಗಳೆಂದು ಹೇಳಬಹುದು. ಆದರೆ ವಿನೋದ, ನಿರ್ಭರ್ತ್ಸನ, ಕೊಳಕುಮಾತು ಹಾಗು ಕಹಿಮಾತುಗಳ ಹಿಂದೆ ಮಾನವೀಯ ಸ್ವಭಾವದ ಕೆಲವು ಪ್ರಕಾರಗಳು ಅಡಕವಾಗಿವೆ. ಇವುಗಳನ್ನು ನಾವು ವಿಮರ್ಶಿಸಿದರೆ ವಿಡಂಬನೆಯ ವಿವಿಧರೂಪಗಳು ಗೋಚರವಾಗುವವು.

(ಅ) ವಿಡಂಬಕನ ಹಾಗೂ ಉಪದೇಶಕನ ಉದ್ದೇಶಗಳು ಒಂದೇಯೆಂದು ಹಿಂದೆ ಹೇಳಿದೆಯಷ್ಟೇ. ಹೀಗೆ ನೇರವಾಗಿ ದುರ್ನೀತಿಯನ್ನು ಖಂಡಿಸಿ ನೀತಿಯನ್ನು ಮಂಡಿಸುತ್ತ ನಡೆಯುವದು ಪರ್ಸಿಯಸ್ ಎಂಬ ರೋಮನ್ ವಿಡಂಬಕನ ಹಾದಿ. ಗಾ:ವರ್* ಎಂಬ ಆಂಗ್ಲಕವಿಯ ಕನ್‌ಫೆಸಿಯೊ ಅಮ್ಯಾಂಟಿಸ್ ಎಂಬ ಕೃತಿಯಲ್ಲಿಯೂ ಇದನ್ನು ನಾವು ಕಾಣಬಹುದು. ಇಲ್ಲಿ ವಿಡಂಬಕನ ಉಳಿದ ಸಾಧನೆಗಳಿಗಿಂತ ಉದ್ದೇಶವೇ ಹೆಚ್ಚಾಗಿ ಒಡೆದು ಕಾಣುತ್ತದೆ.

(ಬ) ವಿಡಂಬಕನು ಹುಟ್ಟು ವಿನೋದಿಯಿದ್ದಾಗ ಇನ್ನೊಂದು ಬಗೆಯ ವಿಡಂಬನೆಯು ಹುಟ್ಟುತ್ತದೆ. ಅವನು ಬರಿ ಉಪನ್ಯಾಸ ಕೊಡುವದಿಲ್ಲ, ಸಿಟ್ಟಿನ ಭರದಲ್ಲಿ ಒದರಾಡುವುದಿಲ್ಲ, ತನ್ನ ದುಃಖವನ್ನೇ ತೋಡಿಕೊಳ್ಳುವುದಿಲ್ಲ. ವಿಡಂಬಿತ ವ್ಯಕ್ತಿಯಾಗಲೀ ವಸ್ತುವಾಗಲೀ ಅವನ ವಿದ್ಯಾವಿನೋದಕ್ಕೆ (artful play) ಸಾಧನೆ ಮಾತ್ರ. ಎಂಥ ಪಾಪದ ಮೊಟ್ಟೆಗಳನ್ನು ಕಂಡರೂ ಅವನು ತನ್ನ ಮನಃಶಾಂತಿಯನ್ನು ಕಳೆದುಕೊಳ್ಳುವುದಿಲ್ಲ. ಇದು ಹೊರೇಸ್, ಚಾಸರ್, ಸರ್ವ್ಯಾಂಟಿಸ್, ಡ್ರಾಯಡನ್ ಮೊದಲಾದವರ ಹಾದಿ.

(ಕ) ನಿರಾಶಾವಾದಿಯಾದರೂ ಕೊಳಕನ ಕಾಣ್ಕೆಯು ವಿನೋದಪೂರ್ಣವಾದುದರಿಂದ ಅವನ ವಿಡಂಬನೆಯು ಮೇಲೆ ಹೇಳಿದ ರೀತಿಗೆ ಸಮೀಪವಾಗಿದೆ. ತಾಮ್ರದಂತಹ ಕಹಿರುಚಿಯು ಮಾತ್ರ ಅವನ ಕೃತಿಯಲ್ಲಿ ಹೆಚ್ಚಾಗಿರುತ್ತದೆ. ಅನತೋಲ್ ಫ್ರಾನ್ಸ್ ಎಂಬ ಫ್ರೆಂಚ್ ಲೇಖಕನ ಕೃತಿಗಳನ್ನೂ ಕಾಃಂಗ್ರೀವನ ನಾಟಕಗಳನ್ನೂ ಇಲ್ಲಿ ನಾವು ಉದಾಹರಿಸಬಹುದು.

(ಡ) ನಿರ್ಭರ್ತ್ಸನೆಯ ಮೂಲವನ್ನು ಹೀಗೆ ವರ್ಣಿಸಬಹುದು: ಸಮಾಜದ ಅಪೂರ್ಣತೆಯನ್ನು ನೋಡಿ ಸಾಹಿತಿಯು ದ್ವೇಷಗೊಂಡಾಗ ಕ್ರೋಧದ ತೂಕವೇ ಅವನ ಮನಸ್ಸಿನಲ್ಲಿ ಹೆಚ್ಚಾಗಿ ವಿನೋದವು ತೀರ ಕಡಿಮೆ ಪ್ರಮಾಣದಲ್ಲಿ ಉಳಿಯು

* ಹಾ:ಲ್ ಎಂದು ಬರೆವಲ್ಲಿ ':' ಇದು ಉಪಸರ್ಗವಲ್ಲ. 'Hall' ಎಂಬ ಶಬ್ದದಲ್ಲಿಯ 'ಆ'ದ ಉಚ್ಚಾರವನ್ನು ತೋರಿಸಲಿಕ್ಕೆ ':' ಎಂಬ ಸಂಕೇತವನ್ನು ಕಾಯ್ದಿದೆ.

ತ್ತದೆ. ಆಗ ಅವನು ಭವಿಷ್ಯವಾದಿ (prophet)ಯಂತೆ ಶಪಿಸುತ್ತಾನೆ, ಬಯ್ಯು ತ್ತಾನೆ, ಒದರಾಡುತ್ತಾನೆ. ಇಂತಹ ಆವೇಶದಿಂದ ಒಮ್ಮೊಮ್ಮೆ ಅವನ ಕೃತಿಯು ಅದ್ಭುತರಮ್ಯವಾಗುತ್ತದೆ. ಈ ಮಾದರಿಯನ್ನು ಜುವ್ಹೆನಲ್, ಲ್ಯಾಗ್ಲಂಡ್, ಮಾರ್ಸ್‍ಟನ್ ಮೊದಲಾದವರ ಕೃತಿಗಳಲ್ಲಿ ಅಭ್ಯಸಿಸಬಹುದು.

(ಇ) ಕಹಿನುಡಿಯಲ್ಲಿ ವ್ಯಕ್ತವಾಗುವ ವಿಡಂಬನೆಯು ಅಪರೂಪವಾಗಿ ದೊರಕುತ್ತದೆ. ಇಲ್ಲಿಯು ವಿಡಂಬಕನು ಕೇವಲ ಸಮಾಜಸುಧಾರಣೆಗಾಗಿ ಬರೆಯು ಲೆಸಗುವುದಿಲ್ಲ. ಇಂಥದೊಂದು ಉದ್ದೇಶವು ಅವನ ಮನಸ್ಸಿನಲ್ಲಿ ಅಡಕವಾಗಿರ ಬಹುದು. ಆದರೆ ಕಹಿನುಡಿಯಲ್ಲಿ ತನ್ನ ಮನಸ್ಸಿನ ಅಸಮಾಧಾನವನ್ನೆಲ್ಲ—ವ್ಯಾಕುಲತೆಯನ್ನೆಲ್ಲ—ತುಂಬಿ ಅವನು ಶಾಂತಿಯನ್ನು ಪಡೆಯಲೆಳಸುತ್ತಾನೆ. ಸಮಾಜದ ಶಾಂತಿಯೂ ಅವನಿಗೆ ಇಷ್ಟವಾದುದು. ಆದರೆ ಜಗತ್ತಿನಲ್ಲಿಯ ವೈಷಮ್ಯ ಗಳನ್ನು ಕಂಡು ಭುಗಿಲ್ಲನೆದ್ದ ಸ್ವಂತದ ಚಿತ್ತಕ್ಷೋಭೆಯ ಉಪಶಮನವೂ ಅಷ್ಟೇ ಮಹತ್ವವಾದುದು. ಇದನ್ನು ನಾವು ಸ್ವಿಫ್ಟ್ ಎಂಬ ಆಂಗ್ಲಲೇಖಕನು ಬರೆದ "ಗಲಿವರನ ಯಾತ್ರೆಗಳು" ಎಂಬ ಪುಸ್ತಕದ ಮೂರನೆಯ ಹಾಗು ನಾಲ್ಕನೆಯ ಭಾಗಗಳಲ್ಲಿ ಕಾಣಬಹುದು.

ಎರಡನೆಯ ಮಾದರಿಯ ವಿಡಂಬನೆಯಲ್ಲಿ ಹಾಸ್ಯದ ವಿವಿಧ ಪ್ರಕಾರಗಳ ಬಳಕೆಯು ಸಂಪೂರ್ಣವಾಗಿ ಆಗಬಲ್ಲುದೆಂಬುದು ಮೇಲೆಯೇ ಕಾಣುತ್ತದೆ.

§ ೪

ಹಾಗಾದರೆ ಅಪೂರ್ಣತೆಯನ್ನು ಪೂರ್ಣವಾಗಿ ಲಯಗೊಳಿಸಿ ಇನ್ನೂವರೆಗೆ ಜಗತ್ತಿನಲ್ಲಿ ಅಪೂರ್ಣವಾಗಿ ನೆಲೆಗೊಳಿಸಿದ್ದ ಪೂರ್ಣತೆಯನ್ನು ಸಂಪೂರ್ಣವಾಗಿ ಬರಮಾಡಿಕೊಳ್ಳುವುದೇ ವಿಡಂಬನೆಯ ಹೊತ್ತ ಹರಕೆಯಾಗಿದೆ, ಅದರ ಹಿರಿಯಾಸೆಯಾಗಿದೆ. ಮೇಲೆ ವಿವರಿಸಿದ ಐದು ರೀತಿಗಳಲ್ಲಿ ವಿಡಂಬನೆಯು ತನ್ನ ಉದ್ದೇಶ ವನ್ನು ಪೂರೈಸಿಕೊಳ್ಳಲು ಪ್ರಯತ್ನಿಸುವದು.

ಮೇಲೆ ತೋರಿಸಿದ ರೀತಿಗಳಲ್ಲಿ ನಾಲ್ಕನೆಯದನ್ನು ಜೋಸೆಫ್ ಹಾಲ್ ಎಂಬವನು ಆಂಗ್ಲಭಾಷೆಯಲ್ಲಿ ಮೊಟ್ಟಮೊದಲು ಕಾವ್ಯರೂಪಕ್ಕೆ ತಂದ. ಲ್ಯಾಂಗ್ಲಂಡನೂ ಅದೇ ಜಾತಿಯ ವಿಡಂಬಕ. ಆದರೆ ರೋಮನ್ ಕಾಲದ ವಿಡಂಬನೆಯ ಪುನರುತ್ಥಾಪನೆಯ ಕಲ್ಪನೆಯನ್ನು ಹಾಲನು ಮೊದಲು ಆಚಾರಕ್ಕಿಳಿಸಿದ. ಅದಕ್ಕಂತೇ ಆತನಿಗೆ ಆತ್ಮವಿಶ್ವಾಸವಿತ್ತು,—ಈ ಹಾದಿಯಲ್ಲಿ ತಾನೇ ಮೊದಲನೆಯ ವಿಡಂಬಕನೆಂದು.

"ಸಾಲುಸಾಲುಗಳಲ್ಲಿ ಕಣೆಹಂದಿಯಂತೆ
ಶರಗಳನು ಸಂಧಿಸಿ ವಿಡಂಬನೆಯು ಬಂತೆ?

ಚಣಚಣಕೆ ತಾಗುತಿಹ ಕಣೆಯು ಮೊನೆ ಚುಚ್ಚಿ
ಕೆಣಕುವವು ಕದ್ದೋದಿ ಕೇಳ್ವವರ ಮುಚ್ಚಿ."

ಎಂದು ಆತನು ವಿಡಂಬನೆಯ ಬಗ್ಗೆ ತನಗಿದ್ದ ಕಲ್ಪನೆಯನ್ನು ಸ್ಪಷ್ಟವಾಗಿಸಿದನು. ೧೭ನೆಯ ಶತಮಾನದ ಆದಿಯಲ್ಲಿ ಹಾ:ಲ್ ಎಂಬವನು ಬರೆದನು. ಅವನ ಸಮಕಾಲೀನನಾದ ವಿದರ್ ಎಂಬ ಲೇಖಕನೂ ಇದೇ ತರಹದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾನೆ:

"ನಾನು ಬರೆದ ವಿಡಂಬನೆಗಳಲ್ಲಿ ಇದೊಂದೇ ಮುಖ್ಯವಾದ ಗುಣವಿರಲಿ: ಕೆಟ್ಟುದೆಂದು ಒಡೆದು ಕಾಣುವದನ್ನೆಲ್ಲ ಕಂಡು ಹಿಡಿದು ದಂಡಿಸುವುದು. ಯಾವ ವ್ಯಕ್ತಿಯನ್ನೂ ಲಕ್ಷ್ಯದಲ್ಲಿಟ್ಟು ಇವುಗಳನ್ನು ಬರೆದಿಲ್ಲ. ಆದರೆ ಎಲ್ಲ ವ್ಯಕ್ತಿಗಳಿಗೂ ಇಲ್ಲಿ ಮಂಗಳಾರತಿಯಾಗಿದೆ."

ಸತ್ಯಪ್ರಿಯತೆ, ಉದಾತ್ತ ಮನೋವೃತ್ತಿ, ಜಗತ್ತನ್ನು ಸುಧಾರಿಸಬೇಕೆಂಬ ಲವಲವಿಕೆ, ಕಟುತರವಾದ ಟೀಕೆಯನ್ನೊಳಕೊಂಡ ವಿಮರ್ಶಾಶಕ್ತಿ, ಹಾಸ್ಯದ ವಿವಿಧ ಪ್ರಕಾರಗಳ ಯೋಜನೆ, ಸಾಹಿತ್ಯಕ್ಕೆ ಅವಶ್ಯವಾದ ನಿರೂಪಣ ಸೌಂದರ್ಯ,—ಇಷ್ಟೆಲ್ಲ ಉತ್ತಮ ವಿಡಂಬನೆಯಲ್ಲಿ ಅವಶ್ಯವಾಗಿ ಇರಬೇಕು. ಡ್ರಾಯ್‌ಡನ್, ಸ್ವಿಫ್ಟ್, ಪೋಪ್, ಬಟ್ಲರ್,—ಇವರೆಲ್ಲ ಉತ್ತಮ ವಿಡಂಬಕರು.

ವೇದಾಂತಿಯಿರಲಿ ಬಿಡಲಿ, ಕಲ್ಪನಾಸೃಷ್ಟಿಯಲ್ಲಿ ವಿಹರಿಸಬಲ್ಲ ಕವಿಯಂತೆ ಒರ್ವ ವ್ಯಕ್ತಿಗೆ ಇನ್ನೊಂದು ಜಗತ್ತಿನಲ್ಲಿ ವಿಶ್ವಾಸವಿರಲಿ ಬಿಡಲಿ,—ನಮ್ಮೆಲ್ಲರ ಈ ಜಗತ್ತಿನಲ್ಲಿಯಾದರೂ ಆ ವ್ಯಕ್ತಿಯು ಇರಲು ಯೋಗ್ಯನೆ? ವಿಡಂಬಕನು ಕೇಳುವ ಪ್ರಶ್ನೆಯೇ ಇದು. ಈ ಪ್ರಶ್ನೆಗೆ ಉತ್ತರ ಕೊಟ್ಟವರು ಮಾತ್ರ ಇನ್ನೊಂದು ಜಗತ್ತಿನ ಬಗ್ಗೆ ವಿಚಾರ ಮಾಡಬಹುದು.

ವಿಡಂಬನೆಯು ಒರ್ವ ವ್ಯಕ್ತಿ, ಸಂಸ್ಥೆ, ಸಮಾಜ, ಪಂಗಡ, ಮತ ಇಲ್ಲವೆ ದೇಶವನ್ನು ಸದೆಬಡಿಯಲು ಯತ್ನಿಸಬಹುದು. ಆದರೆ ವಿಡಂಬನೆಯ ಅರ್ಥವು ಯಾವಾಗಲೂ ಸಾರ್ವತ್ರಿಕ (universal) ಆಗಿರಬೇಕು. "ವಿಡಂಬನೆಯೆಂದರೆ ಒಂದು ಕನ್ನಡಿ; ಅದರೊಳಗೆ ಇಣಿಕಿ ನೋಡುವವರು ತಮ್ಮ ಪ್ರತಿಬಿಂಬವನ್ನು ಬಿಟ್ಟು ಉಳಿದೆಲ್ಲರ ಮೋರೆಗಳನ್ನೂ ಕಾಣುತ್ತಾರೆ." ಎಂದು ಸ್ವಿಫ್ಟ್ ಹೇಳಿದ ಅರ್ಥವೇ ಇದು. ಬಟ್ಲರನು ತನ್ನ ಜೀವಮಾನವಿರುವತನಕ ಆಂಗ್ಲೇಯರನ್ನು ಕುರಿತು "ನಿಮ್ಮೆದುರಿಗೇ ಹೇಳುತ್ತೇನೆ. ನೀವೆಲ್ಲ ಆತ್ಮವಂಚಕರು" ಎಂದು ಹೇಳಿದನು. ಅದಕ್ಕೆ ಆಂಗ್ಲೇಯರು ಪ್ರತಿಯಾಗಿ ನುಡಿಯಲಿಲ್ಲ. "ಅಹುದು. ನೀವು ಹೇಳುವದು ನಿಜ. ಏನೂ ಅಡ್ಡಿಯಿಲ್ಲ. ಆದರೆ ಆತ್ಮವಂಚಕರಾದರೂ ತಪ್ಪೇನು?" ಎಂದು ಮಾತ್ರ ಕೇಳಿದರಂತೆ!

ಸಮಾಜವು ಎಷ್ಟು ಕೊಳೆಯುವದೋ ಅಷ್ಟರ ಮಟ್ಟಿಗೆ ವಿಡಂಬನೆಯು ಬೆಳೆಯುವದು.

ವಿಡಂಬನೆಗೆ ಸ್ಫೂರ್ತಿಯಾಗಿ ನಿಲ್ಲುವದು ಬರಿ ದ್ವೇಷ, ಅಸೂಯೆ ಇಲ್ಲವೆ ಸೇಡು ತೀರಿಸಿಕೊಳ್ಳುವ ಹವ್ಯಾಸವೆಂದು ಹೇಳುವದು ತಪ್ಪು. ಜಗತ್ತನ್ನು ಅಂದ ವಾಗಿಸಬೇಕೆಂಬ ಹಂಬಲ, ಎದೆಯಲ್ಲಿ ತಾಕಲಾಡುತ್ತಿರುವ ಭಾವನೆಗಳನ್ನು ತೋಡಿ ಕೊಳ್ಳಬೇಕೆಂಬ ಹಂಬಲ,—ಇವೇ ವಿಡಂಬನೆಗೆ ಮುಖ್ಯವಾದವು.

"ವಿಡಂಬಕನು ತನ್ನ ಸಂಶೋಧನದಲ್ಲಿಯೂ ರೋಗಪರೀಕ್ಷೆಯಲ್ಲಿಯೂ ವೈಜ್ಞಾನಿಕನಿಗಿರುವ ತದೇಕಧ್ಯಾನವನ್ನು ಪಡೆದಿರಬೇಕು. ಅವನು ತನ್ನ ಆಯುಷ್ಯ ವನ್ನೆಲ್ಲ ರೋಗಗಳನ್ನು ಕಂಡುಹಿಡಿಯುವದರಲ್ಲಿಯೇ ಕಳೆಯುತ್ತಾನೆ. ರೋಗ ಗಳನ್ನು ಗುಣಪಡಿಸುವದು ಅವನ ಕರ್ತವ್ಯವಲ್ಲ, ಮುಂದಾಳುಗಳದು." ಕಲೆಗಳೆಲ್ಲ ಬರಿ ಸೂಳೆಬೆಡಗಾದಾಗ, ಕೊಳೆತುಹೋದ ಸಂಪ್ರದಾಯಗಳೂ ವಿಚಾರಗಳೂ ಕೊಡೆ ಹಿಡಿದುಕೊಂಡು ಮೆರೆಯುವಾಗ, ಬಾಳುವೆಯೆಲ್ಲ ಬರಿ ಬಯಲಾಟವಾದಾಗ ಕಲೋಪಾಸಕರು ವಿಡಂಬಕರಾಗುತ್ತಾರೆ. "ಹುಲ್ಲಿನ ಮೇಲೆ ಹೊರಳಾಡಿ ನಾಯಿಯು ತನ್ನ ಪ್ರಕೃತಿ ಸ್ವಾಸ್ಥ್ಯವನ್ನು ಪಡೆಯುವಂತೆ ಸಮಾಜವು ವಿಡಂಬನೆ ಯೆಂಬ 'ಸೋನಾಮುಖಿ'ಯನ್ನು ತೆಗೆದುಕೊಂಡು ತನ್ನ ಪ್ರಕೃತಿಯನ್ನು ಕಾಯ್ದು ಕೊಳ್ಳುತ್ತದೆ." ಇನ್ನು ಈ ವಿಚಾರದಲ್ಲಿ ಲಿಂಡ್ ಎಂಬ ವಿಮರ್ಶಕನು ಹೇಳಿದ್ದನ್ನು ಗಮನಿಸಬಹುದು. "ವಿಡಂಬನೆಯು ಅನುದಾತ್ತ ಕಲೆಯೆಂಬುದೇನೋ ನಿಜ. ಸ್ವರ್ಗದಲ್ಲಿ ವಿಡಂಬಕರಿಗೆ ಬಹುಶಃ ಸ್ಥಾನವಿರಲಾರದು. ಆದರೆ ಅಲ್ಲಿ ವೈದ್ಯರಿಗೂ ಪ್ರವೇಶವು ದೊರೆಯಲಾರದು. ಬೇನೆಯಿಂದ ಬಳಲುತ್ತಿದ್ದ ಜಗತ್ತಿಗೆ ಮಾತ್ರ ವಿಡಂಬನೆಯ ಔಷಧವೂ ಬೇಕಾಗುತ್ತದೆ......ಸಾಹಿತ್ಯದ ಉಳಿದ ವಿಭಾಗಗಳಂತೆ ವಿಡಂಬನೆಯು ಮಾನವನ ಮೋರೆಗೆ ಕನ್ನಡಿ ಹಿಡಿಯುತ್ತದೆ. ಆದರೆ ಅವನು ಗಟ್ಟಿಗನೂ ಒಳ್ಳೆಯವನೂ ಆಗಿದ್ದಾಗ ಹೇಗೆ ಕಾಣುವನೆಂಬುದನ್ನು ಅದು ತೋರಿಸುವುದಿಲ್ಲ; ಪಶುವಿನಂತೆ ವ್ಯವಹರಿಸಿದಾಗ, ಮೈ ತುಂಬ ಹುಣ್ಣಾಗಿ ಮೋರೆ ಯೆಲ್ಲ ಹಳದಿಯಿಟ್ಟಾಗ, ಅವನು ಹೇಗಿರುವನೆಂಬುದನ್ನು ಅವನಿಗೇ ವಿಡಂಬನೆಯು ತೋರಿಸುತ್ತದೆ. ಈ ರೀತಿಯಾಗಿ ರೋಗಿಗಳನ್ನಷ್ಟೇ ವಿಡಂಬನೆಯು ಪ್ರತಿಬಿಂಬಿ ಸಿದರೂ ಅದು ಹಾಗೆ ಉದ್ದೇಶಪೂರ್ವಕವಾಗಿ ಮಾಡುತ್ತದೆ. ಎಂದಿಗೂ ಗುಣಮುಖ ವಾಗದಂಥ ರೋಗಿಗಳಿಂದ ತುಂಬಿದಂಥ ಆಸ್ಪತ್ರೆಯೇ ಜಗತ್ತಾಗಿದ್ದರೆ, ಈ ಪ್ರತಿ ಬಿಂಬದ ಕಾರ್ಯವನ್ನು ಮಾಡಗೊಡುವದೇ ಅಪರಾಧವಾಗಬಹುದಾಗಿತ್ತು. ವಿಡಂ ಬನೆಯನ್ನು ಬರೆಯುವುದು ಅತ್ಯಂತ ನಿಷ್ಠೆಯಿಂದ ಮಾಡುವ ಪವಿತ್ರಕಾರ್ಯವಾಗಿದೆ, ವಿರಾಮದ ಹಾಸ್ಯಕ್ರೀಡೆಯಲ್ಲ. 'ಸ್ವಿಫ್ಟ್' ಎಂಬ ವಿಡಂಬಕನು ಮಾನವ ಜಾತಿಯ ಬಗ್ಗೆ ನಿರಾಶಾಮಯವಾದ ಉದ್ಗಾರಗಳನ್ನು ದ್ವೇಷಪೂರ್ವಕವಾಗಿ ತೆಗೆದಿರಬಹುದು;

ಆದರೆ ವಿಡಂಬನೆಗಳನ್ನು ಬರೆದು, ಜನರು ಅಲಕ್ಷಿಸಿದ ತತ್ತ್ವಗಳಿಗೋಸ್ಕರ ಲೆಕ್ಕಣಿಕೆಯನ್ನು ಹಿರಿಯುವಷ್ಟಾದರೂ ಅವನು ಆಶಾವಾದಿಯಾಗಿದ್ದನು."

§ ೫

'ಪುರುಷ ಸರಸ್ವತಿ'ಯ ವಿಷಯಕ್ಕೆ ನಾನು ಹೆಚ್ಚಿಗೆ ಬರೆಯಬೇಕಾಗಿಲ್ಲ. ಗೆ. ರಾಜರತ್ನಂರವರೇ 'ಹತ್ತುವರ್ಷ'ದಲ್ಲಿ ತಮ್ಮ ಸಹಜರಮ್ಯವಾದ ರೀತಿಯಿಂದ ಅದರ ಕಲಾಪೂರ್ಣತೆಯನ್ನು ಕಾಣಿಸಿದ್ದಾರೆ. ವಿಡಂಬನೆಯು ಕನ್ನಡ ಸಾಹಿತ್ಯಕ್ಕೆ ಹೊರತಾದುದಲ್ಲ. ಜಾತಿಮತಗಳ ಖಂಡನೆಯು ನಮ್ಮ ಹಿಂದಿನ ಕವಿಗಳಿಗೆ ವಿಡಂಬನೆಯು ಬೇಡುವ ಎಲ್ಲ ಸಾಮಗ್ರಿಗಳನ್ನು ಒದಗಿಸಿಕೊಟ್ಟಿತು. ದಾಸರ ಹಾಗು ವಚನಕಾರರ ತೀಕ್ಷ್ಣ ಧಾರ್ಮಿಕ ಹಾಗು ಸಾಮಾಜಿಕ ವಿಡಂಬನೆಗೆ ಮನಸೋಲದವರಿಲ್ಲ. ಸರ್ವಜ್ಞನನ್ನು ಮೀರುವ ವಿಡಂಬಕನನ್ನು ನಾವಿನ್ನೆಲ್ಲಿ ಕಾಣಬಹುದು?

ಇಂದಿನ ನೂತನ ಯುಗದಲ್ಲಿಯೂ ವಿಡಂಬನೆಯು ಮಹತ್ವದ ಕಾರ್ಯವನ್ನು ಕೈಕೊಂಡಿದೆ. ನಾಟಕ—ಕಾದಂಬರಿಗಳಲ್ಲಿ ಅದು ಧರ್ಮ, ರಾಜಕಾರಣ, ಸಮಾಜ, ಮಾನವ ಜಾತಿಯ ಹುಟ್ಟುಗುಣ,—ಇವೆಲ್ಲ ರಂಗಗಳನ್ನು ವ್ಯಾಪಿಸಿ ನಿಂತಿದೆ. ಕೈಲಾಗದವನು ಮೈಯೆಲ್ಲ ಪರಚಿಕೊಂಡಂತೆ ನಾವಿಂದು ಇಚ್ಛಿಸಿದ ಸ್ವಾತಂತ್ರ್ಯವು ದೊರೆಯದೆ ಕಂಡ ಅಪೂರ್ಣತೆಗಳ ಮೇಲೆಲ್ಲ ಹರಿಹಾಯುತ್ತಿದ್ದೇವೆ. ಇಂಥ ಟೀಕೆ-ವಿಮರ್ಶೆಯಿಲ್ಲದೆ ಇಂದಿನ ಸಾಹಿತ್ಯವು ಬದುಕಲಾರದೆಂದು ಸಹ ಒಮ್ಮೊಮ್ಮೆ ನಮಗೆ ಭಾಸವಾಗುತ್ತದೆ.

ಆದರೆ ಸಾಹಿತ್ತಿಕ ವಿಡಂಬನೆಯ (literary satire) ಕಾಲವು ನಮ್ಮಲ್ಲಿ ಇನ್ನೂ ಪೂರ್ಣವಾಗಿ ಬಂದಿಲ್ಲ. ಕಾರಣವೇನೆಂದರೆ, ಅದಕ್ಕೆ ಬೇಕಾದ ಶಾಂತಮಯ ವಾತಾವರಣ ಹಾಗು ಕಾವ್ಯಶಾಸ್ತ್ರವಿನೋದದಲ್ಲಿ ಕಾಲಕಳೆಯಲು—ಕಾಫಿ ಕ್ಲಬ್ಬುಗಳಲ್ಲಿ ಕುಳಿತುಕೊಂಡು ಹರಟೆ ಕೊಚ್ಚಲು—ಬುದ್ಧಿ ನಾಲಿಗೆಗಳಿಗೆ ಬೇಕಾದ ವಿರಾಮ ಹಾಗು ಆರ್ಥಿಕ ಸ್ವಾತಂತ್ರ್ಯಗಳು ಇನ್ನೂ ನಮ್ಮ ಸಮಾಜಕ್ಕೆ ಲಭಿಸಿಲ್ಲ. ಡ್ರಾಯಡನ್ನನ ಕಾಲದಲ್ಲಿ ಮಾತ್ರ ಇಂಗ್ಲಂಡಿನಲ್ಲಿ ಸಾಹಿತ್ತಿಕ ವಿಡಂಬನೆಯು ಸಂಪೂರ್ಣವಾಗಿ ಬೆಳೆಯಿತು. ಇದ್ದುದರಲ್ಲಿಯೇ ಅಲ್ಪಸ್ವಲ್ಪ ವಿರಾಮವಿದ್ದ ಮೈಸೂರು ಸಂಸ್ಥಾನದಲ್ಲಿ 'ನ–ಣ'ಗಳ ನೀರಸವಾದವು ಹುಟ್ಟಿ 'ಪುರುಷಸರಸ್ವತಿ'ಯಲ್ಲಿ ಸಾಹಿತ್ತಿಕ ವಿಡಂಬನೆಗೆ ಗುರಿಯಾದುದು ಅರ್ಥಪೂರ್ಣವಾಗಿದೆ.

ನಮ್ಮ ಹಿಂದಿನ ಸಾಹಿತ್ಯದಲ್ಲಿ ಸಾಹಿತ್ತಿಕ ವಿಡಂಬನೆಯು ವಿಶೇಷವಾಗಿರಲಿಲ್ಲವೆಂದು ತೋರುತ್ತದೆ. ಆಣಕಗಬ್ಬವು ಸಹ ಇತ್ತೀಚೆಗೆ ಬೆಳಕಿಗೆ ಬಂದಿದೆ. ಆದರೆ ಹಳೆ–ಹೊಸ ಸಾಹಿತ್ಯ ಧ್ಯೇಯಗಳ ತಾಕಲಾಟದ ಕಾಲದಲ್ಲಿ ಪಂಡಿತರು ಆಧುನಿಕರನ್ನು ವಿಡಂಬಿಸುವದೂ ಆಧುನಿಕರು ಪಂಡಿತರ ರೀತಿಗಳನ್ನು ಅಲ್ಲಗಳೆಯುವದೂ

ಸಹಜವಾಗಿದೆ. ಪಂಡಿತರ ವಿಡಂಬನೆಯಲ್ಲಿ ವಾಡಿಕೆಯಾಗಿ ಹುರುಳಿರುವುದಿಲ್ಲ; ಪುತ್ತೂರಿನ ಶಂಭುಶರ್ಮರು ಕೆಲವು ವರ್ಷಗಳ ಹಿಂದೆ ನಾಡಹಬ್ಬದ ಪ್ರಸಂಗದಲ್ಲಿ ಮಾಡಿದ ಸ್ವಾಗತಭಾಷಣವು ಮಾತ್ರ ಅಲ್ಲಲ್ಲಿ ಸೊಗಸಾಗಿದೆ. ಆದರೆ ಶಂಭುಶರ್ಮರು ಸಹ ಹೊಸ ಸಾಹಿತ್ಯದ ವೈರಿಗಳಲ್ಲ, ವಿಮರ್ಶಕರು. ಹೊಸರೀತಿಯು ಎಷ್ಟರ ಮಟ್ಟಿಗೆ ನೆಲೆಗೊಂಡಿದೆಯೆಂಬುದನ್ನು 'ಪಂಡಿತ'ರಾದ ರಾಜರತ್ನಂರವರು 'ಪುರುಷ ಸರಸ್ವತಿ'ಯಲ್ಲಿ ಪಂಡಿತರನ್ನು ಪರಾಮರ್ಶಿಸಿದ ರೀತಿಯಲ್ಲಿಯೇ ಕಾಣಬಹುದು!

'ಪುರುಷಸರಸ್ವತಿ'ಯು ಕನ್ನಡ ಪದ್ಯಕಾವ್ಯದಲ್ಲಿ ಮೊದಲನೆಯ ಸುದೀರ್ಘ ಸಾಹಿತ್ತಿಕ ವಿಡಂಬನೆಯೆಂದು ಹೇಳಬಹುದು. ಹಳೆಯ ಸಂಪ್ರದಾಯದ ಜೀವಾಳ ವೆಲ್ಲ ಕಳೆದುಹೋಗಿ ಪರಂಪರಾನುಗತಿಕರು ಅದನ್ನು ಶುಷ್ಕವಾಗಿ ಅನುಸರಿಸುತ್ತಿರು ವಾಗ ಸಂಭವಿಸುವ ಬಹುತರ ಎಲ್ಲ ಪ್ರಮಾದಗಳನ್ನು ರಾಜರತ್ನಂರವರು ಇಲ್ಲಿ ವಿಡಂಬಿಸಿದ್ದಾರೆ. 'ನ-ಣ'ಗಳ ಮಹಾಯುದ್ಧವು ಅವರ ಕೃತಿಗೆ ಉದ್ದೀಪನವಾಗಿ ಪರಿಣಮಿಸಿತು. ನಾಳೆ ಆ ಚರ್ಚೆಯು ಬದುಕುವುದು ತನ್ನ ಮಹತ್ವದಿಂದಲ್ಲ, 'ಪುರುಷಸರಸ್ವತಿ'ಯ ಮಹತ್ವದಿಂದ. ಹೊಸಕಾಲಕ್ಕೆ ಹೊಂದಿಕೊಳ್ಳದ ಷಟ್ಪದಿ ಛಂದಸ್ಸಿನ ಅಪಪ್ರಯೋಗ, ಮೂಢ ಸಂಶೋಧನೆಯ ಹುಚ್ಚು ಹೊನಲು, ಪಾಂಡಿತ್ಯದ ಶುಷ್ಕ ಬಹಿರಂಗ, ಕವಿಗಳ ಬಿರುದಾವಳಿಗಳು, ಪರಮಾಲಂಕಾರಗಳು, ಹುಚ್ಚು ಸಂಶೋಧಕರ ಭಾಷಣಗಳ ವಿಚಿತ್ರ ವಸ್ತುಗಳು,—ಇವೆಲ್ಲ ಇಲ್ಲಿಯ ವಿಡಂಬನೆಯ ಬಲೆಯಲ್ಲಿ ಸಿಕ್ಕಿವೆ. ಒಮ್ಮೊಮ್ಮೆ ವಿಡಂಬಿತ ವಸ್ತುವಿನಷ್ಟೆ ಇಲ್ಲಿಯ ಸಾಹಿತ್ತಿಕ ವಿಡಂಬನೆಯು ಓದಲಿಕ್ಕೆ ಗಡುಚಾಗಿದೆ. ಆದರೆ ಕಷ್ಟಪಟ್ಟು ಓದಿದಲ್ಲಿ ಓದುಗರನ್ನು ಈ ಕೃತಿಯು ಪ್ರಸನ್ನಚಿತ್ತರನ್ನಾಗಿ ಮಾಡುವದು. ಗ್ರಂಥಕರ್ತರು ಉತ್ತರನನ್ನು—ಅಭಿಮನ್ಯುವಿನಂತೆ ವೀರನಲ್ಲದವನನ್ನು—ಸೋಲಿಸಲು ಇಂಥ ಚಕ್ರವ್ಯೂಹವನ್ನು ಕಟ್ಟಿದರೆಂದು ಮಾತ್ರ ಒಮ್ಮೊಮ್ಮೆ ಮನಸ್ಸಿಗೆ ನೊಣ ಕಡಿದ ಹಾಗಾಗುತ್ತದೆ.

ಈ ಲೇಖನವನ್ನು ಬರೆಯುವಾಗ ಕೆಲವು ಪುಸ್ತಕಗಳಿಗೆ ಲೇಖಕನು ಋಣಿ ಯಾಗಿದ್ದಾನೆ:—

(೧) The enjoyment of Laughter by Max Eastman.
(೨) A Theory of Laughter by Krishna Menon.
(೩) Satire by Gilbert Cannon.
(೪) An Essay on Laughter by Sully.

ಸಾಂಗಲಿ
೧೭-೧೧-೩೯ } ವಿ. ಕೃ. ಗೋಕಾಕ.

# ಮುನ್ನುಡಿಗಳಲ್ಲೊಂದು

ನಮ್ಮ ಪುಸ್ತಕಗಳಿಗೆ ನಾವೇ ಮುನ್ನುಡಿ ಬರೆಯುವುದಾದರೆ ಯಾವ ತೊಡಕೂ ಇರುವುದಿಲ್ಲ. ಲೇಖಕನ ಸುಖದುಃಖಗಳನ್ನು ವಾಚಕರಿಗೆ—ಬೇಡಾಗಲಿ, ಬೇಕಾಗಲಿ—ಹಂಚಿಕೊಡುವುದು; ಬಳಿಕ ತನ್ನ ಯಾವತ್ತು ಸಾಹಿತ್ಯಸೇವೆ, ಕಲಾಸೇವೆ, ಸಮಾಜಸೇವೆಗಳ ವಿಷಯ ಕೊಚ್ಚಿಕೊಳ್ಳುವುದು; ಅನಂತರ ಯಥಾವತ್ತಾಗಿ ತನಗೆ ಬರೆಯಲು ನೆರವಾದ ಸ್ವಾನ್ ಇಂಕಿನಿಂದ ತೊಡಗಿ, ಕಂಪೋಜಿಟರ ಮಹಾಶಯನ ತನಕ ವಂದನೆಯನ್ನರ್ಪಿಸುವುದು—ಈ ರೀತಿಗಳಿಂದ ಮುಗಿಸಿದರಾಯಿತು.

ಪರರ ಗ್ರಂಥಕ್ಕೆ ಮುನ್ನುಡಿ ಬರೆಯುವುದು ನಾನು ಇದೇ ಮೊದಲು. ಅದೂ ಗೆಳೆಯರೊಬ್ಬರ ಪ್ರಯತ್ನಕ್ಕೆ ಮುನ್ನುಡಿ ಬರೆಯುವುದೆಂದರೆ—ಸಂಕೋಚ. ಇತ್ತ, ಏನು ಬರೆಯಲಿ ಎಂಬ ತಳಮಳದ ಜೊತೆಗೆ, ತಾನು ಮುನ್ನುಡಿಕಾರನಾಗಿ ಲೇಖಕನನ್ನು ಪ್ರೋತ್ಸಾಹಿಸುತ್ತಿರುವೆನಲ್ಲಾ ಎಂಬ ಹೆಮ್ಮೆ. ಸುಪೀರಿಯಾರಿಟಿ ಮತ್ತು ಇನ್‌ಫೀರಿಯಾರಿಟಿ ಕಾಂಪ್ಲೆಕ್ಸುಗಳೆರಡರ ವಿಚಿತ್ರ ಮಿಶ್ರಣ. ಹಿಂದೆ ನಾನೂ ಒಂದೆರಡು ಬೂಕುಗಳನ್ನು ಪರರಿಗೆ ಮುನ್ನುಡಿಗಾಗಿ ಕಳುಹಿಸಿದ್ದೆ. ಅವರು ದಾಕ್ಷಿಣ್ಯಕ್ಕೊಳಗಾಗಿ ಯಾವ ರೀತಿಯ ಸಂಕಟಪಟ್ಟರೋ—ನಾನರಿಯೆ; ಅಂತು ನನ್ನ ಪುಸ್ತಕಕ್ಕೆ ಅಮೂಲ್ಯ ಯೋಗ್ಯತಾಪತ್ರಗಳು ದೊರೆತುದು ನಿಜ.

ಮುನ್ನುಡಿ ಕೇಳುವವರ ಉದ್ದೇಶ ಹೇಗಿರುವುದೆಂದು ನಮಗೇನು ಗೊತ್ತು ? ತನ್ನ ಕೃತಿಯನ್ನು 'ಭೇಷೆನ್ನಲಿ' ಎಂದಿರುವುದು ತೀರ ಸ್ವಾಭಾವಿಕವಾದ ಆಸೆ. ಇತ್ತ ಮುನ್ನುಡಿಕಾರನ ಅವಸ್ಥೆ ಹೇಗಿರುವುದೋ. ಹೊಗಳಿ ಬರೆಯದೆ ಗತಿಯಿಲ್ಲ; ಹೊಗಳಿ ಬರೆಯುವರೆ ಮತಿಯಿಲ್ಲ. ಹಾಗೂ ಹೀಗೂ ತನ್ನ ಮನೋವ್ಯಥೆಯನ್ನು ಬದಿಗಿರಿಸಿ—'ಈ ಕೃತಿ ಚೆನ್ನಾಗಿದೆ, ಅಥವಾ ಯೋಗ್ಯ ಪ್ರೋತ್ಸಾಹವಿತ್ತಲ್ಲಿ ಈ ಕೂಸು ಬೆಳೆದೀತು'—ಎಂದು ಇಬ್ಬಾಯಾಗಿ ಬರೆದು, ಅವರು ತಮಗೆ ಒದಗಿದ ಪೀಡೆಯನ್ನು ತೊಲಗಿಸಿಕೊಳ್ಳಬಹುದು.

ಕೆಲಕೆಲವರಿಗೆ ಮುನ್ನುಡಿ ಬರೆಯುವ ಚಟವೇ ಹತ್ತುವುದುಂಟು. ಯಾರೂ ಪುಸ್ತಕ ಬರೆಯುತ್ತಿಲ್ಲವಲ್ಲ, ಬರೆದರೂ ಮುನ್ನುಡಿಗೆ ತನ್ನ ಬಳಿ ಕಳುಹಿಸುತ್ತಿಲ್ಲವಲ್ಲ ಎಂಬ ಚಿಂತೆ ಅವರಿಗೆ ಹತ್ತುವುದು ಸ್ವಾಭಾವಿಕ. ಕಾರಣ—ಎಷ್ಟೆಂದರೂ ಬರಹಗಾರನಿಗಿಂತ ಮುನ್ನುಡಿಕಾರನು ಮೇಲಿನ ಮಟ್ಟದವನೆಂದು ಒಂದು ಒಳಹೆಮ್ಮೆ ಇದ್ದೇ ಇದೆ. ಮಾತ್ರವಲ್ಲ—ತನ್ನ ವಿಷಯ ತಾನೇ ಹೇಳಿಕೊಳ್ಳಲು ಮುನ್ನುಡಿಗಿಂತ

ಉಪಯುಕ್ತ ಸಂದರ್ಭವಿಲ್ಲ. ಇಷ್ಟು ಮುನ್ನುಡಿ ಸಿದ್ಧಾಂತಗಳು ನನ್ನೆದುರಿಗೆ ಬಂದು ನಿಂತಿವೆಯಾದರೂ ಪ್ರಕೃತದ ಮುನ್ನುಡಿಯನ್ನು ಹೇಗೆ 'ವಾಂತಿ'ಸಬೇಕೆಂದು ನನಗೇ ತಿಳಿಯದು. ಈ ಗಂಡುವಾಗ್ದೇವಿ ನನಗೇಕೆ ತಗಲಿಕೊಂಡಿತು ಎಂಬ ಮಹಾವ್ಯಥೆ ಬೇರೆ ಬಂದುಬಿಟ್ಟಿದೆ.

ಈ ಪುರುಷಸರಸ್ವತಿಯ ಮೂರುಬರಹಗಳನ್ನು ನಾನು ಯಾವ ರೀತಿಯಾಗಿ ತಿಳಿಯಲಿ? ಅವು ಕಾವ್ಯವಂತೂ ಅಲ್ಲ; ಕುಕಾವ್ಯ, ಅಕಾವ್ಯ, ವಿಕಾವ್ಯಗಳ ಸಾಲಿಗೆ ಸೇರತಕ್ಕುವೇ; ಅಣಕ, ಅವಹಾಸ, ವಿಡಂಬನ—ಈ ಬಾಬತ್ತಿಗೆ ಬೀಳುವುವೇ—ಎಂಬುದು ಪ್ರಥಮ ಚಿಂತೆ. ಬಳಿಕ ಈ ಪುರುಷಸರಸ್ವತಿಯ ಕುಲಗೋತ್ರದ ವಿಚಾರ. ಇದು 'ಪುರುಷ ಸರಸ್ವತಿ'ಯೋ, ಸರಸ ಪುರುಷ್ವತಿಯೋ, ಪುರಸತಿನ ಸರಸವೋ—ಇವು ಬೇರೆ ಸಂದಿಗ್ಧ ವಿಷಯಗಳು. ಬಳಿಕ (      ) ಕಾವ್ಯವಸ್ತುವನ್ನು ಪರ್ಯಾಲೋಚಿಸಲು ಅದೂ ಬಗೆಹರಿಯದಂತಿದೆ. ಅದರಲ್ಲಿನ ಕಾವ್ಯ ವಿಷಯ ವಾವುದು, ಕಾವು ವಿಷವಾವುದು—ಇದೆಲ್ಲ ಗೊಂದಲದ ವಿಚಾರ. ಆದಷ್ಟುಮಟ್ಟಿಗೆ ನಾನು ಈ ಮೂರು ಬರಹಗಳನ್ನು ಓದದೇನೆ ಮುನ್ನುಡಿಯನ್ನು ಬರೆಯಬೇಕೆಂದು ಬಯಸುತ್ತೇನೆ—'ಅಜ್ಞಾನಕ್ಕಿಂತ ಆನಂದವಿಲ್ಲ' ಎಂಬ ಹಾದಿ ಹಿಡಿದು. ಆದರೆ ಹಿಂದಿನ ಪ್ರಾಚೀನ ಬೇರೆ ಬೆನ್ನುಹತ್ತಿದೆ. ನನ್ನ ಗೆಳೆಯರೊಬ್ಬರು ಇದನ್ನು ನನಗೆ ಕೇಳಿಸಿಬಿಟ್ಟಿದ್ದಾರೆ.

ಈ (      ) ಕಾವ್ಯಗಳನ್ನು ಪ್ರಚಾರಕ್ಕೆ ತಂದ, ತರುತ್ತಿರುವ ವ ತರಲಿರುವ ಜಿ. ಪಿ. ರಾಜರತ್ನಂರವರು ಪಂಡಿತ-ಪಾಮರರ ಕ್ರೋಧಾಗ್ನಿಗೆ ಗುರಿಯಾಗಿದ್ದಾರೆಂದೂ ಕೇಳಿಬರುತ್ತಿದೆ. ಹೀಗಿರಲು ನಾನು ಅವರು ಮಾಡುವ ಕೃತಿಗೆ ಬೆಂಬಲ ಕೊಟ್ಟು, ಬೇಕೆಂದೇ ಬೆಂಕಿಗೆ ಹಾರುವ ಹಾತೆಯಾಗಲೇ? ಮೇಲೆ ಈ ಗ್ರಂಥ ಪ್ರಕಾಶಕರು ಹಲವರನ್ನು ಹೀಗೆ ದಾಕ್ಷಿಣ್ಯಕ್ಕೆ ತೊಡಕಿಸಿ ಮುನ್ನುಡಿ ಬರೆಯಿಸುವ ಕಾರಣವೇನಿರಬಹುದು? ಮುಖ್ಯ, ಬರೆಹಕ್ಕಿಂತ ಮುನ್ನುಡಿ ವಿಪುಲವಾಗಿ, ನರಕದಲ್ಲಿ ಪುರಿಸ ಸರಸತಿಗೆ ದೊರೆಯುವ ಬಹುಮಾನದ ಹೆಚ್ಚಿನ ಅಂಶ ಈ ಮುನ್ನುಡಿಕಾರರಲ್ಲಿ ಹಂಚಿಹೋಗಲಿ—ಎಂಬ ಉದ್ದೇಶವೇ?

ಏನೂ ಇರಲಿ, ಪರಲೋಕದ ವರೆಗೆ ನನ್ನ ಕೂಗು ಕೇಳಿಸದಾದರೂ, ಈ ಲೋಕದ ಪಂಡಿತ ಪಾಮರರಲ್ಲಿ ನನ್ನ ವಿನಂತಿ ಇಷ್ಟೆ: ಈ ಬರಹಕಾರನಿಗೆ ತಾವು ಮನಃಪೂರ್ವಕವಾಗಿ ಅರ್ಪಿಸಲಿರುವ ಶಾಪಗಳನ್ನು, ಬಡ ಮುನ್ನುಡಿಕಾರನಾದ ನನಗೆ ಮೈ ಮರೆವಿನಿಂದಲಾದರೂ ಅರ್ಪಿಸಬಾರದೆಂದು.

ನಾನೇ ಆದರೆ ಇದಕ್ಕೂ ಹೆಚ್ಚಿಗೆ ಮುನ್ನುಡಿ ಬರೆಯಲಾರೆ. ಮಹಾ ಯುದ್ಧವಾಗುತ್ತಿದೆ, ಕಾಗದದ ಬೆಲೆಯೇರುತ್ತಿದೆ—ಪ್ರಕಾಶಕರನ್ನು ತುಂಬ ನಷ್ಟಕ್ಕೆ ಗುರಿ

ಮಾಡಬಾರದೆಂದು ಸುಮ್ಮನಾಗುತ್ತಿದ್ದೆ. ಆದರೆ ಇಲ್ಲಿ ನನ್ನನ್ನು ತೊಡಕಿಗೆ ಸಿಲುಕಿಸಿದ, ಪುರುಷ ಸರಸ್ವತಿಯ ಏಜೆಂಟರ ಮೇಲೆ ನನಗೆ ಯಾವ ದಾಕ್ಷಿಣ್ಯವೂ ಉಳಿದಿಲ್ಲ. ಆದುದರಿಂದ ಇನ್ನೂ ಕೆಲವು ಹಾಳೆಗಳನ್ನು ತುಂಬಿಸಿಬಿಡುತ್ತೇನೆ.

ಅಲ್ಲದೆ, ನನಗೂ ಈ ಬರಹಗಳನ್ನು ಕಂಡು ಒಮ್ಮೊಮ್ಮೆ ಕೆರಳುತ್ತದೆ. ನ-ಣ ವಾದವನ್ನು ಕಂಡು ಇಷ್ಟು ಟೀಕಿಸಬೇಕೆ? ನಾನು ನೀವಾದರೆ 'ಕರ್ನಾಟಕ—ಕರ್ಣಾಟಕ'ಗಳ ಗೊಂದಲದಿಂದ ದೂರಾಗಿರಬಲ್ಲೆವು. ಹೋಗಲಿ, ಅವರು ಜಗಳ ಮಾಡಿದರು—ಎಂದಿಟ್ಟುಕೊಳ್ಳುವ. ಜಗಳಾಡದೆ ಬೇರೇನು ಮಾಡಬೇಕು? ಪಾಂಡಿತ್ಯದ ಶಸ್ತ್ರಾಸ್ತ್ರಪ್ರದರ್ಶನಕ್ಕೆ ಇದಕ್ಕೂ ಉತ್ತಮ ಪ್ರಸಂಗ ಯಾವುದು? ತ್ರಾಣವಿರುವವರು ಕಾದಾಡಲಿ. ನಮಗೆ ಪಾಂಡಿತ್ಯವಿಲ್ಲ. 'ಜನಕ್ಕೆಲ್ಲ ನವಿರಲಿ, ಹೆಣಕ್ಕೆಲ್ಲ ಣವಿರಲಿ'—ಹೀಗೆಂದು ತೆಪ್ಪಗೆ ಬಿದ್ದಿರಬಾರದೇ?

ನನಗಂತು ತೋರುತ್ತದೆ—ಈ ರೀತಿಯ (   ) ಕಾವ್ಯಗಳು ಪಾಶ್ಚಾತ್ಯರಿಂದ ನಮಗೆ ಬಂದುವು. ಆಂಗ್ಲವಿದ್ಯಾಭ್ಯಾಸದಲ್ಲಿ ಜಾರಿಬಿದ್ದ ರಾಜರತ್ನಂರವರು ಇದರ ಪ್ರಸಾರಕ್ಕೆ ತೊಡಗಿದುದೂ ಸ್ವಾಭಾವಿಕ. ಆದರೆ ಪುರಿಸ ಸರಸ್ವತಿಯು ಭಾರತೀಯನಾಗಿದ್ದಲ್ಲಿ ಈ ರೀತಿಯ ಅಭಾರತೀಯ ಬರಹ ಬರೆಯುತ್ತಿದ್ದನೇ—ಎಂಬ ಸಂಶಯ ಬರುತ್ತದೆ.

ಅಣಕ, ವಿಡಂಬನ, ವ್ಯಂಗ್ಯ, ಕುಚೋದ್ಯ, ಅಪಹಾಸ—ಇವೆಲ್ಲ ಪಾಶ್ಚಾತ್ಯದಲ್ಲಿ ವಿಮರ್ಶೆ, ಟೀಕೆಗಳ ಸರಸ ವಿಧಾನಗಳಂತೆ. ಜನತೆಯಲ್ಲಿ ಏನಾದರೊಂದು ಮಂಕು, ತಪ್ಪು, ಜೀವನಕ್ಕೆ ಬೆಪ್ಪು, ಭಾವನೆಗಳಿಗೆ ಹೆಪ್ಪು ಕಟ್ಟಿಕೊಂಡಿದ್ದರೆ ಅವನ್ನು ನಯವಾಗಿ ನಗಿಸುತ್ತ ಕಿತ್ತು ತೆಗೆಯುವ ರೀತಿಯಂತೆ. ಏನಾದರೊಂದು ತಪ್ಪು ಸಂಪ್ರದಾಯವನ್ನೋ, ಜೀವನವನ್ನೋ ಕಂಡು ನೇರಾಗಿ, ಸರಳವಾಗಿ ಟೀಕಿಸುವ ಬದಲು ಅಣಕವು ಲೇಸಂತೆ. ನೇರಾದ ಟೀಕೆಯಿಂದ ಮನಸ್ಸು ಉಗ್ರವಾಗಿ ಕೆರಳಿ ಯಾವ ಮನಃಕ್ಲೇಶ ಕ್ರೌರ್ಯಗಳಿಗೆ ಕಾರಣವಾಗಬಹುದೋ—ಅದು ಅಣಕದಿಂದ ಆಗದಂತೆ. ಅಣಕ ತನ್ನ ತಪ್ಪಿಗಾಗಿ ತಾನೇ ನಗುವಂತೆ ಮಾಡುವುದಂತೆ.

ನನಗನಿಸುವುದು ಹೀಗೆ: ಅಣಕವು ನೇರಾದ ಟೀಕೆಗಿಂತ ಸೌಮ್ಯವಿರಬಹುದು; ಆದರೆ ಅದು ಬಲು ವಕ್ರವಾದ ಹಾದಿ. ನಮಗೆ ತಿಳಿಯದಂತೆ ನಮ್ಮ ತಪ್ಪಿಗಾಗಿ ನಾವೇ ನಗುವಂತೆ ಅದು ಮಾಡುವುದು ನಿಜವಾದರೆ ಅದು ಕೇವಲ 'ಟೀಕಾಶಕುನಿ'. ಕಾರಣ—ನಾವು ನಕ್ಕುದು ನಮ್ಮನ್ನೇ ಕಂಡು—ಎಂದು ತಿಳಿಯುವುದು ನಕ್ಕಾದ ಬಳಿಕ. ಈ ರೀತಿಯಿಂದಲೇ ವಾಲ್ಟಯರ್‌ನಂಥವರು ಸಮಾಜಕ್ರಾಂತಿಗೆ ಕಾರಣರಾದರಂತೆ. ಒಮ್ಮೆ ಈ ಸಿದ್ಧಾಂತವನ್ನು ನಾವು ಒಪ್ಪಿದರೂ ಇದನ್ನು ಕೇವಲ ಪಾಶ್ಚಾತ್ಯರ ಮಟ್ಟಿಗೆ ಒಪ್ಪೋಣ. ಕಾರಣ—ಪಾಶ್ಚಾತ್ಯರು ತಮ್ಮ ತಪ್ಪನ್ನು ಕಂಡು ತಾವೇ ನಗುವಷ್ಟು ಲಘುಶೀಲರು (ಯಾನೆ ಮಂಕರು). ಅವರಲ್ಲಿನ ಹಾಸ್ಯಶೀಲ

ತೆಯೂ ಅದರಿಂದ ವ್ಯಕ್ತವಾಗುವುದು. ನಮ್ಮದು ಘನಗಂಭೀರ ದೇಶ. ಹಾಗೆ ನಾವು ಅನಾವಶ್ಯಕವಾಗಿ ನಗುವವರಲ್ಲ. ರೇಗಬೇಕಾದಲ್ಲಿ ನಕ್ಕು ನಮ್ಮ ನರಗಳ ದೌರ್ಬಲ್ಯವನ್ನು ತೋರ್ಪಡಿಸುವವರೂ ಅಲ್ಲ. ಅಣಕವು ಎಲ್ಲರಲ್ಲೂ ಫಲಕಾರಿ ಯಾಗಲಾರದು. ಅದು ಪರಿಣಾಮಕಾರಿಯಾಗಲು ಮಿದುಳಿನ ಚಿಪ್ಪು ಅರ್ಧ ಇಂಚಿಗಿಂತ ತೆಳ್ಳಗಿರಬೇಕು—ಎಂದು ವೈಜ್ಞಾನಿಕರು ಹೇಳುತ್ತಾರೆ. ಮಿದುಳಿನ ಚಿಪ್ಪು ಈ ಅಳತೆಗೂ ಮೀರಿದಲ್ಲಿ ಅಣಕವು ಒಬ್ಬನನ್ನು ರೇಗಿಸಬಹುದೆಂದು ಹೇಳುತ್ತಾರೆ.

ಹೀಗೆ ನಾನು ಬರೆದಲ್ಲಿ ನಮ್ಮಲ್ಲಿ ಹಾಸ್ಯಬುದ್ಧಿ ಇಲ್ಲವೆಂದು ನಾನು ಹೇಳಿದೆನೆಂದು ತಿಳಿಯಬಾರದು. ಈ ಪ್ರಸಂಗದಲ್ಲಿ ನಾನು ನಮ್ಮ ದೇಶಕ್ಕೊಮ್ಮೆ ಬಂದ ಹಂಗೇರಿ ದೇಶದ ಹಾಸ್ಯಕಾರನಾದ ಲಾಸ್ಲೊ ಷಾಟ್ಸ್‌ನ ಒಂದು ಅನುಭವ ಹೇಳಿದರೆ ಸಾಕು. ಲಾಸ್ಲೊ ಅಲ್ಲಲ್ಲಿ ಸಂಚರಿಸಿ, ಜನರನ್ನು ತನ್ನ ಹಾಸ್ಯದಿಂದ ನಗಿಸಿಬಿಟ್ಟವ. ಅವನು ನಮ್ಮ ದೇಶ ತಿರುಗಿದಾಗ, ಅವನ ಹಾಸ್ಯ ವಚನಗಳಿಗೆ ಇಲ್ಲಿ ಹೆಚ್ಚಿನವರು ನಗಲೇ ಇಲ್ಲವಂತೆ, ಅದೇ ಅವನು ಮಲಯಕ್ಕೆ ಹೋದಾಗ, ಅಲ್ಲಿನ ಹಿಂದೀಯರು ಅವನ ನುಡಿಗಳನ್ನು ಕೇಳಿ ಗೊಳ್ಳೆಂದು ನಗುತ್ತಿದ್ದರಂತೆ. ಇದರಿಂದ ಆತನು—ಹಿಂದೀಯರಿಗೆ ಹಾಸ್ಯಶೀಲತೆ (sense of humour) ಇಲ್ಲವೆಂದನಂತೆ. ಮರುದಿನವೇ ವರ್ತಮಾನ ಪತ್ರಿಕೆಗಳಲ್ಲಿ ಕಾಳಗಕ್ಕೆ ತೊಡಗಿದರು. ಲಾಸ್ಲೊ ಊರುಬಿಟ್ಟು ಮೈಯುಳಿಸಿಕೊಂಡನು. ಆದರೂ ನಮ್ಮವರು ಬಿಡಲಿಲ್ಲ. ಮದ್ರಾಸಿನಲ್ಲಿ ಒಂದು ಸಾರ್ವಜನಿಕ ಸಭೆಯೇ ನೆರೆಯಿತು. ಅಲ್ಲಿನ ಮುಂದಾಳುಗಳು, ಪಂಡಿತರು, ವಿಮರ್ಶಾಶಿಖಾಮಣಿಗಳೆನಿಸಿದವರು ಸೇರಿ ಲಾಸ್ಲೊವನ್ನು ಬಹಿರಂಗವಾಗಿ ಖಂಡಿಸಿ ತುಂಡರಿಸಿದರು. “ಹಿಂದೀಯರಲ್ಲಿ ಹಾಸ್ಯಶೀಲವಿಲ್ಲವೇ? ನಮ್ಮ ಪ್ರಾಚೀನ ಸಾಹಿತ್ಯವನ್ನು ಕಂಡವರಿಗೆ ಎಷ್ಟು ಹಾಸ್ಯಶೀಲತೆ ಇತ್ತೆಂದು ಕಾಣುವುದು” ಎಂದು ಪ್ರತಿವಾದವಿತ್ತರು. ಈ ಪ್ರಸಂಗ ನನಗಂತು ತುಂಬ ಹಾಸ್ಯಾಸ್ಪದವಾಗಿ ಕಂಡಿತು. ಲಾಸ್ಲೊ ಇನ್ನೊಮ್ಮೆ ನಮ್ಮ ದೇಶಕ್ಕೆ ಬಂದರೆ ಅವನನ್ನು ಕೇಳಬೇಕೆಂದಿದ್ದೇನೆ—“ಲಾಸ್ಲೋ, ನೀನು ನಮ್ಮ ಪ್ರಾಚೀನರಲ್ಲಿ ಹಾಸ್ಯಶೀಲತೆ ಇಲ್ಲವೆಂದುದು ಸಮವೇ?”

ಹಿಂದುಸ್ಥಾನದಲ್ಲಿ ಬಡತನ ತುಂಬಿದೆಯೆಂದು ಒಬ್ಬ ಪಾಶ್ಚಾತ್ಯನು ನುಡಿದರೆ, ಕೂಡಲೆ ಸಾರ್ವಜನಿಕ ಸಭೆಮಾಡಿ “ನಮ್ಮ ಪ್ರಾಚೀನ ಭಾರತದಲ್ಲಿ ವಿದ್ಯಾರಣ್ಯರು ಸುವರ್ಣವೃಷ್ಟಿ ಕರೆದಿದ್ದರು” ಎನ್ನುವವರು ನಾವು.

ನಮ್ಮ ಹಾಸ್ಯಶೀಲವನ್ನು ಉದಹರಿಸಲು ಬೇರೊಂದು ಉದಾಹರಣೆ ಕೊಡುತ್ತೇನೆ. ಇದೂ ಸಹ ಲಾಸ್ಲೋ ಪ್ರಕರಣವೇ. ಲಾಸ್ಲೋ ನಮ್ಮ ಊರಿಗೆ ಬಂದಾಗ, ನಮ್ಮಲ್ಲಿಯ ಒಂದು ಕಾಲೇಜಿನ ಪ್ರೊಫೆಸರ್ ಜನಗಳ ವ್ಯಂಗ್ಯ ಚಿತ್ರಗಳನ್ನು ಬರೆದು ಕೊಟ್ಟನು. ಸಂಬಂಧಿಸಿದ ವ್ಯಕ್ತಿಗಳಲ್ಲಿ ಹಲವರು ಅವನ್ನು ಕಂಡು ನಕ್ಕರು. ಆದರೆ

ಲಾಸ್ಲೊ ಬರೆದು ಕೊಟ್ಟ ಒಂದು ಚಿತ್ರ ಮಾತ್ರ ಅಲ್ಲಿಂದ ಮರೆಯಾಯಿತು. ಅವನು ಯಾರನ್ನು ಬರೆದಿದ್ದನೋ, ಅವರೇ ಆ ಚಿತ್ರವನ್ನು ಮರೆಯಿಸಿಬಿಟ್ಟರು. ಈ ಗೃಹಸ್ಥರು ನಿತ್ಯವೂ ತಮ್ಮ ಕಾಲೇಜು ಮಿಸಲೆನಿಯ ಸಲುವಾಗಿ ಇತರರ ವ್ಯಂಗ್ಯಚಿತ್ರ ಬರೆಯು ವುದರಲ್ಲಿ ನಿಸ್ಸೀಮರು. ಉಳಿದವರನ್ನು ಕಂಡು ನಗುವ ಶೀಲ ಅವರಲ್ಲಿ ಕಡಿಮೆ ಯಿದ್ದಿಲ್ಲ; ಆದರೆ ತನ್ನನ್ನು ಕಂಡು ನಗುವ ಬುದ್ಧಿ ಬಂದಿರಲಿಲ್ಲ.

ವ್ಯಂಗ್ಯ, ಅಪಹಾಸ, ಅಣಕಗಳು ಫಲಕಾರಿಯಾಗಲು ಸಮಾಜದಲ್ಲಿ ನಗು ಶೀಲ ತುಂಬಬೇಕು. ವ್ಯಕ್ತಿಯಲ್ಲಾಗಲಿ, ಸಮಾಜದಲ್ಲಾಗಲಿ, ಜನತೆಯಲ್ಲಾಗಲಿ ಈ ಗುಣ ಬಹಳವಾಗಿದ್ದರೆ ವಿವಿಧ ರೀತಿಯ ಅಣಕ, ಅವಹಾಸಗಳು ನೋವಿಲ್ಲದೆ ಮಾಡುವ ಶಸ್ತ್ರ ಚಿಕಿತ್ಸೆಯಂತೆ ಜೀವನದ ಬೆಳವಣಿಗೆಗೆ ಸಹಾಯವಾಗುವುವು. ಎಲ್ಲಿ ಜನತೆಯು ಕೊಕೇನ್‌ಗೂ ಬಾಹಿರವಾಗಿರುವುದೋ, ಅಲ್ಲಿ ಕ್ಲೋರೊಫಾರ್ಮಿನಂಥ ಅಮಲು ಕೊಡಬೇಕು. ಅಣಕಕ್ಕೆ ಗುರಿಯಾದ ವ್ಯಕ್ತಿಗೆ ತಿಳಿಯದೆ ಹೋದರೂ ಚಿಕಿತ್ಸೆಯ ವಿಚಾರ ಸುತ್ತಲಿನ ಜನರಿಗೆ ತಿಳಿದೀತು. ಆದರೆ ಕೆಲವೊಂದು ಜೀವನ ಕ್ಲೋರೊಫಾರ್ಮಿನ ವಶೀಕರಣಕ್ಕೂ ಬಾರದುವು. ಅಂಥ ಮೇರೆ ಮೀರಿದ ಸಮಾ ಜಕ್ಕೆ 'ಪೋಸ್ಟ್‌ಮಾರ್ಟೆಮ್' ಚಿಕಿತ್ಸೆಯೊಂದೇ ಫಲಕಾರಿಯಾದುದು.

ಪುರುಷ ಸರಸ್ವತಿಯ ಈ ಮೂರು ಬರಹಗಳು ನಮ್ಮ ಸಾಹಿತ್ಯ ಜೀವನದ ಮೇಲೆ ಮಾಡುತ್ತಿರುವ ವಿವಿಧ ಪ್ರಯೋಗಗಳಾಗಿ ಕಾಣುವುವು. ಇವನ್ನು ಉದಾರ ದೃಷ್ಟಿಯಿಂದ ನಾವು ಸ್ವೀಕರಿಸೆವಾದರೆ, ಪ್ರಾಯಶಃ ನಾನು ಹಿಂದೆ ಸೂಚಿಸಿದ ಕೊನೆಯ ಮಾದರಿಯ ಚಿಕಿತ್ಸೆಗೇನೆ ತಕ್ಕವರಾಗುವೆವು.

ಪುತ್ತೂರು,
೨೯-೧೧-೩೯.

**ಶಿವರಾಮ ಕಾರಂತ.**

# ವಿಡಂಬನ

ಮನುಷ್ಯನು ವಿಧಾತನ ಅಪೂರ್ವ ಸೃಷ್ಟಿ, ಆದರೆ ಅಪೂರ್ಣ ಸೃಷ್ಟಿ. ಅವನನ್ನು ನಿರ್ಮಿಸಲು ಬ್ರಹ್ಮ ಬಳಸಿಕೊಳ್ಳುವ ಜೇಡಿ ಮಣ್ಣಿನ ಜಾಯಮಾನವೇ ಹಾಗೆ. ಅಸ್ವಾರಸ್ಯವಿನಿತಿಲ್ಲದೆ ಸರ್ವಾಂಗಸುಂದರನಾದ ನರನನ್ನು ಅರಸುವುದೂ ಒಂದೆ, ಕಚ್ಚುಗೊದ್ದ ಹರಿದಾಡದ ಮಾವಿನ ತೋಪನ್ನು ಹುಡುಕುವುದೂ ಒಂದೆ. ಮಾನವನ ಏರ್ಪಾಟಾಗಿ, ಮಾನವನಿಗೆ ಸಂಬಂಧಿಸಿದ ಯಂತ್ರ ತಂತ್ರ ಸಂಘ ಸಂಸ್ಥೆ ಕರ್ಮ ಕಲೆ ಧರ್ಮ ದರ್ಶನಗಳೆಲ್ಲದರ ಅದೃಷ್ಟವೂ ಅಷ್ಟೆ. ಅಂದ ಕುಂದುಗಳ ಮಿಶ್ರಣವು ಪ್ರತಿಯೊಂದಕ್ಕೂ ಅಂಟಿಕೊಂಡಿದೆ. ಈ ಸಂಗತಿಯನ್ನು ಕುರಿತು "ಅಯ್ಯೊ, ದುರ್ವಿಧಿಯೆ!" ಎಂದು ಪಶ್ಚಾತ್ತಾಪ ಪಡಬಹುದು; "ಆಹ, ಆಚ್ಚರಿಯೆ!" ಎಂದು ಪರಿತೋಷ ಪಡಬಹುದು. ಮೇದಿನಿಯ ಮೇಲಿರುವುದಕ್ಕೆಲ್ಲ ಮಿಶ್ರಲಕ್ಷಣ ಮುಖ್ಯವಿಷಯ; ಆದನ್ನು ಮರೆಯದಿದ್ದರೆ ಸರಿ. ಮನುಷ್ಯ, ಮನುಷ್ಯ ಸಮಾಜ, ಮನುಷ್ಯ ವಿರಚನೆಗಳನ್ನು ಮೂರು ಬಗೆಯಲ್ಲಿ ಈಕ್ಷಿಸಲು ಸಾಧ್ಯ: ಮೃದು ದೃಷ್ಟಿ, ಸಮ ದೃಷ್ಟಿ, ನಿಷ್ಠುರ ದೃಷ್ಟಿ. ಮೃದು ದೃಷ್ಟಿಯವರಿಗೆ ಕಪಟ ಬಡಿವಾರ ಠಕ್ಕು ಟೌಳಿ ಅವಿನಯ ಡಂಭ ದುರ್ಮಾರ್ಗವಾವುದೂ ಕಾಣಿಸುವುದೇ ಇಲ್ಲ; ಕಂಡು ಬಂದರೂ ಅತ್ಯಲ್ಪವೂ ಗಮನಕ್ಕೆ ಅನರ್ಹವೂ ಆದ ನ್ಯೂನತೆಯಾಗಿ ತೋರಿಬಿಡುತ್ತದೆ. ಅವರದು ಸುಕುಮಾರ ಸ್ವಭಾವ; ದೇವರಂಥವರು; ಸರ್ವಂಸಹೆಯ ಸತ್ಪುತ್ರರು. ಎಲ್ಲದರಲ್ಲಿಯೂ ಎಲ್ಲದರಿಂದಲೂ ಬೆಲ್ಲವನ್ನು ಪಡೆಯುವುದು ಅವರ ವಾಡಿಕೆ. ಸಜ್ಜನರೆಂದು ಅವರು ಪಟ್ಟ ಕಟ್ಟಿಸಿಕೊಂಡರೂ ಪ್ರಪಂಚವನ್ನು ಬಲ್ಲವರೆಂದೂ ವಿಚಾರಪರರೆಂದೂ ವಾದಿಸಲಾಗದು. ಸಮದೃಷ್ಟಿಯವರಿಗಾದರೋ ಒಳ್ಳೆಯದು ಕೆಟ್ಟುದೆರಡನ್ನೂ ಲಕ್ಷಿಸುವ, ಪರೀಕ್ಷಿಸುವ ಯೋಗ್ಯತೆಯುಂಟು. ಆದರೆ ಬೇಕನ್ನನ ಈ ಸೂತ್ರವು ಅವರಿಗೆ ಒಪ್ಪು: "ಮನ್ನಿಸುವುದು ಅರಸನಿಗೆ ಸಮನಾದ ಅಧಿಕಾರ." ಅದನ್ನು ನಿರಂತರ ಅನುಷ್ಠಾನ ಗೈದು ಪೂಜೆಗೊಳ್ಳುತ್ತಾರೆ. ಸಕಲ ಸಮಯದಲ್ಲಿಯೂ ಸಮಸ್ತ ಸಂದರ್ಭದಲ್ಲಿಯೂ ಜೀವನವಾಗಲಿ ಸಂಸ್ಕೃತಿಯಾಗಲಿ ಸ್ವೀಕರಣೀಯವಲ್ಲದಿದ್ದರೂ ಒಟ್ಟಿನಲ್ಲಿ ಅವರಿಗೆ ಲೋಕ ಅಪೇಕ್ಷಣೀಯ, ಆನಂದಕರ. ಅವರ ಬಾಯಿಂದ "ಕತ್ತೆ ಬೂದಿಲಿ ಹೊರಳೆ ಭಕ್ತನಂತಾಗುವುದೆ?" "ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ!" "ಉದರ ವೈರಾಗ್ಯವಿದು!" "ಕುಕವಿ ನಿಡುಗೊರಲೆತ್ತಲ್ ಶರಭಕ್ಕೆ ಕರಭನೆಣೆಯೆನಿಸುಗುಮೇ?" ಮುಂತಾದ ಮಾತುಗಳು ಹೊರಬೀಳವು. ಇನ್ನು ಉಳಿದವರು ನಿಷ್ಠುರರು; ಪರಿಹಾಸ ಮಾಡಬಹುದಾದರೆ ಒಂದು ತರಹದ ವಾಮಾಕ್ಷಿಗಳು. ಅನೃತ ಮೋಸ ದುರ್ಗಂಧ

ಅಹಂಕಾರ ಕ್ರೌರ್ಯ ಅನ್ಯಾಯಾದಿ ಅನಾಚಾರಗಳು ಅವರ ಕಣ್ಣಿಗೆ ಭೂತಗಳಂತೆ ಭಾರಿಯಾಗಿ ನಿಲ್ಲುತ್ತವೆ. ಅವರ ಮತದಲ್ಲಿ ಅವಾವುವೂ ಕ್ಷಮಾರ್ಹವಲ್ಲ, ಕಶಾರ್ಹ. ಅವನ್ನು ಉದಾಸೀನ ಮಾಡಲೂ ಆಗದು, ಅವಿಂದ ಹೇರಳ ಅಪಘಾತವೆಂಬ ಅಂಜಿಕೆ. ಹೀಗೆ ನೆರೆಹೊರೆಯ ಅನುಭವವು ಅವರಿಗೆ ಆಶೆ ಆಹ್ಲಾದ ಉತ್ಸಾಹ ಗಳನ್ನು ದಯಪಾಲಿಸುವುದರ ಬದಲು ಜುಗುಪ್ಸೆ ಅಸಮಾಧಾನ ಆತಂಕಗಳನ್ನೇ ತಂದು ಒಡ್ಡುತ್ತದೆ. ಅವು ಅಂತರ್ಯದಲ್ಲಿ ಬೆಳೆದು ತೀಕ್ಷ್ಣವಾಗಿ ಸಿಟ್ಟಿನ ರೂಪ ವನ್ನು ತಾಳುತ್ತವೆ. ಬಾಳಿನ ರೋಗ ರುಜಿನ ಕಲ್ಮಷ ಕುರೂಪಗಳನ್ನು ತೊಡೆದು ಹಾಕಲು ಹಾತೊರೆಯುವುದೇ ಆ ಪವಿತ್ರ ಕೋಪದ ಸ್ವಭಾವ. ಆ ಒಕ್ಕಲಿನ ಕೆಲ ವರು ರುದ್ರ ದೂರ್ವಾಸರು, ಇನ್ನು ಕೆಲವರು ಉಗ್ರ ಜಮದಗ್ನಿಗಳು, ವಿಶ್ವಾಮಿತ್ರ ನಂತೆ ಶೂರರು ಅಷ್ಟು ಮಂದಿ, ವಸಿಷ್ಠನಂದದ ಮಹಾನುಭಾವರು ಮತ್ತಷ್ಟು ಮಂದಿ. ವಾಗ್ದೇವಿಯ ಅನುಗ್ರಹಕ್ಕೆ ಪಾತ್ರರಾದ ಮುನಿಗಳು ಕವಿಗಳಾಗುತ್ತಾರೆ; ದೂಷಣೆ ಧಿಕ್ಕಾರ ಕಟಕಿ ನಕಲಿ ಮಿತಹಾಸಾದಿ ವಕ್ರೋಕ್ತಿ ವೈವಿಧ್ಯವೇ ಅವರ ಸಂಗ್ರಾಮ ಸಾಮಗ್ರಿ; ಅವರ ವಾಗ್ಯುದ್ಧವೇ ವಿಡಂಬನ.

ಸಾಹಿತ್ಯ ಸೀಮೆಯಲ್ಲಿ ನಾನಾ ವಿಧದ ವ್ಯವಸಾಯಿಗಳುಂಟು: ಮಹಾಕಾವ್ಯದ ಆಡಳಿತಗಾರ ಕುಲ, ನಾಟಕ ವ್ಯಾಪಾರಿಗಳು, ಕಾದಂಬರಿಯ ಸಾಹುಕಾರಪೇಟೆ, ಭಾವಗೀತೆಯ ಸರ್ಕಸು ಗುಂಪು, ಸಣ್ಣ ಕಥೆಯ ಕಾಫಿತಿಂಡಿ ಕೊಟಡಿ, ಪ್ರಬಂಧದ ಬಯಲಾಟದವರು, ಕವಿಚರಿತ್ರೆಯ ಕೂಲಿಗಾರ ಸಂದೋಹ, ವಿಮರ್ಶಕ ಪೋಲೀಸು ಸಿಬ್ಬಂದಿ. ವಿಡಂಬನ ಕೃಷಿಯವರನ್ನು ಏನೆಂದು ಕರೆಯೋಣ ? ನಗರ ನೈರ್ಮಲ್ಯ ಪಡೆಯೆನ್ನೋಣವೆ? ಏತಕ್ಕೆಂದರೆ ಅವರ ದುಡಿಮೆ ಊರಿನ ಆರೋಗ್ಯಕ್ಕೆ ಅತ್ಯ ಗತ್ಯವಾದ್ದು ; ಊರು ಅವರನ್ನು ಮೆಚ್ಚುವುದು ಮಾತ್ರ ಅಪರೂಪ. ದಿನಚರಿಯ ಕಸದ ರಾಶಿಗಳೇ ಅವರ ಗಮನದ ಅಂಶ; ಸಂದಿಗೊಂದಿಗಳೇ ಅವರ ಉದ್ಯೋ ಗದ ಉಪವನ. ಈ ಅನಿವಾರ್ಯ ಆವಶ್ಯಕತೆಯಿಂದ ವಿಡಂಬನಕಾರರು ಗಾಂಪರ ಗೇಲಿಗೆ ಗುರಿಯಾಗುವುದು ಸಾಮಾನ್ಯ ಸಮಾಚಾರ. ಹೀಗೆ ಅವರಿಗೆ ಜನತೆ ಯಿಂದ ಅಗೌರವ; ಕಾವ್ಯಪ್ರಪಂಚದಲ್ಲಾದರೂ ರುಚಿಫಲವಿದೆಯೆ ? ಮಿಕ್ಕಿನ ಕವಿ ಗಳಲ್ಲಿ ಕನಿಷ್ಟರು, ಸ್ಫೂರ್ತಿಯ ಸೋಂಕಿಲ್ಲದೆ ಸುಮ್ಮನೆ ದುಡ್ಡಿಗೆ ಗುಲಾಮರಾಗಿ ಜೀತ ಗೈಯುವವರಿಗೆ ಕೂಡ ಒಂದೊಂದು ಬಾರಿಯಾದರೂ ಸಾಹಿತ್ಯ ಸುಂದರಿಯ ಸಂದರ್ಶನ ಲಭಿಸಬಹುದು. ವಿಡಂಬನವನ್ನು ಕೈ ಹಿಡಿದವನಿಗೆ ಅದು ದುರ್ಲಭ, ಬಹುಶಃ ಅಸಾಧ್ಯ. ಸತ್ಯ, ಹಿತ, ಸೌಂದರ್ಯಗಳಲ್ಲಿ ಅವನಿಗೆ ಪ್ರತ್ಯಕ್ಷ ಪಕ್ಷಪಾತ ಸಲ್ಲದು; ಅಸತ್ಯ, ಅಸಹ್ಯ, ವಿಕಟ ರೂಪಗಳ ವಿರೋಧದ ಮೂಲಕ ಪರೋಕ್ಷವಾಗಿ ಅಂತಹ ವಿಶ್ವಾಸವನ್ನು ಸೂಚಿಸಲು ಅನುಮತಿಯುಂಟು. ಮನತೋರಿದಂತೆ ಅವ ನನ್ನು ಮೂದಲೆಯ ಕೋಶದಲ್ಲಿ ಬಡಿಯುವವರೇ ಹೆಚ್ಚು: ದೋಷೈಕ ದೃಕ್ಕು ;

ನಡೆಯುವ ನುಡಿಯುವ ನಾಗರಹಾವು; ಕೊಳಚೆಯಲ್ಲಿ ಹೊರಳಾಡುವ ಹುಳು; ನರದ್ವೇಷಿ; ಗಜ್ಜುಗ ಬೆಳೆದ ಕಣ್ಣು; ಕವಿಯಾಗಲಾಟಿಸಿ ವಿಫಲನಾದ ಅಸೂಯಾ ಕ್ರಿಮಿ; ಅಬದ್ಧಮುಖಿ; ಮತ್ತಿನಾಲಗೆಯ ಮೂದೇವಿ; ಪಾಪವನ್ನೇ ಧ್ಯಾನಿಸುವ ಪಿಶಾಚಿ; ಹೀಗೆ ಬುದ್ಧಿವಂತಿಕೆಯಿದ್ದಷ್ಟು ಅಭಿಶಾಪವನ್ನು ರಾಶಿ ಹಾಕಬಹುದು. ಇಲ್ಲಿ ನಮಗೆ ಒಂದು ಎಚ್ಚರಿಕೆ ಬೇಕು: ಹಿತವನ್ನು ಬಯಸಿ ಅಹಿತವನ್ನು ಬಿಟ್ಟು ಬಿಡುವುದು ಯಾವ ನ್ಯಾಯ? ಸುರೂಪವನ್ನು ನೆನೆಯುತ್ತ ಕುರೂಪಕ್ಕೆ ಕಣ್ಣು ಮುಚ್ಚಿದರೆ ಏನು ಸಾರ್ಥಕ? ಅನಿಷ್ಟಕ್ಕೆ ಬಹಿಷ್ಕಾರ ಹಾಕಿ ಅದರಿಂದ ಬೇರೆ ಬಂದಲ್ಲಿ ಅದನ್ನು ಜಯಿಸಿದಂತಾಗಲಿಲ್ಲ. ಸಾಹಿತ್ಯ ಚರಿತ್ರೆಯನ್ನು ಸಾವಧಾನ ದಿಂದ ಓದಿದರೆ ವ್ಯಕ್ತವಾಗುವುದು, ವಿಡಂಬನವಿಲ್ಲದ ಕಾಲವಿಲ್ಲ, ದೇಶವಿಲ್ಲ, ಜನಾಂಗವಿಲ್ಲ, ಜನವಿಲ್ಲ. ಅದರಲ್ಲಿ ಒಂದು ವಿಶೇಷ ಸತ್ವ ಇದ್ದೇ ಇರಬೇಕು, ಒಂದು ಪ್ರಮುಖ ಕಾರ್ಯ ಅವರಿಂದಲೇ ಆಗಬೇಕು. ಅನುಪಯುಕ್ತವೂ ಅಸಹ್ಯವೂ ಆದು ದನ್ನು ಬಹುಕಾಲ ಹೊತ್ತಿರಲು ಭೂಮಿಯು ಸಮ್ಮತಿಸದು.

ತನ್ನ ಕೆಲಸದ ಘನತೆಯನ್ನೂ ಜವಾಬ್ದಾರಿಯನ್ನೂ ಬಲ್ಲ ವಿಡಂಬನಕಾರನಿಗೆ ಗೊತ್ತು ಅದರ ಕಷ್ಟ ನಿಷ್ಠುರವೆಷ್ಟೆಂಬುದು. ಅವನಲ್ಲಿ ಯಜ್ಞೇಶ್ವರನಂತಹ ಪ್ರಾಮಾಣಿಕತೆ ಇರಬೇಕು. ಹೊಗಳುವವನು ಮಿಥ್ಯೆ ಕೃತ್ರಿಮದ ಕಾಲುಗಳಮೇಲೆ ಓಡಾಡಬಹುದು; ತೆಗಳುವವನು ತಥ್ಯದ ವಿಚಾರದಲ್ಲಿ ಎಷ್ಟು ಜಾಗರೂಕತೆಯಿಂದ ಇದ್ದರೂ ಸಾಲದು. ರೇಗಿಸಿದ ವಸ್ತುವಿನ ಮೇಲೆ ಸ್ವಂತ ಸೇಡನ್ನು ತೀರಿಸಿಕೊಳ್ಳು ವುದಕ್ಕಲ್ಲ ವಿಡಂಬನ. ಈರ್ಷ್ಯೆಯ ಸಾಫಲ್ಯವೂ ಅಲ್ಲ ಅದರ ಗುರಿ. ವಿಕಟ ರೀತಿಯ ಗ್ರಾಮ್ಯ ನಕಲಿಗೂ ಉದಾರ ವಿಡಂಬನಕ್ಕೂ ಬಹುದೂರ. ಹಾಳತವಿಲ್ಲದೆ ಹದಗೆಟ್ಟ ಕುಚೇಷ್ಟೆಯೂ ವಿಡಂಬನಕ್ಕೆ ಹೊಲ್ಲ. ಅಷ್ಟೇಕೆ, ಯಾವನೋ ಒಬ್ಬನ ಅಂಗವಿಕಾರ ಸ್ವಭಾವ ವಿಕಾರಗಳನ್ನು ಅಣಕಿಸುವುದು ದುರ್ನಯ ಲೇವಡಿಯೇ ಹೊರತು ನಾಗರಿಕ ಪರಿಹಾಸವಲ್ಲ. ವಿಡಂಬನ ಚತುರನು ಯಾವುದೋ ಒಂದು ಕಲುಷ ವಸ್ತುವಿನಲ್ಲಿ, ಒಂದು ಜೀರ್ಣ ಸಂಪ್ರದಾಯದಲ್ಲಿ, ಒಬ್ಬ ವಯ್ಯಾರದ ವೇಷಧಾರಿ ಯಲ್ಲಿ ಕೃತಕತೆಯನ್ನು ಮೊದಲು ನಿರೀಕ್ಷಿಸಬಹುದು; ಕೂಡಲೇ ಅದನ್ನು ಹೀನಾಯ ಮಾಡಲಿಚ್ಛಿಸುವುದು ಅಯುಕ್ತ, ಅಸಮರ್ಪಕ. ಅವನು ನಿದಾನಿಸ ಬೇಕು, ದೃಷ್ಟಿಯನ್ನು ಸುತ್ತ ತಿರುಗಿಸಬೇಕು. ಬಹು ನಿದರ್ಶನ ವಿಸ್ತರದಲ್ಲಿ, ಅನುಕೂಲವಾದರೆ ಮಾನವಕೋಟಿಯಲ್ಲಿ, ಅದೇ ದೋಷವು ಸಾಧಾರಣವಾದಂತೆ ಬೋಧೆಯಾದಲ್ಲಿ ಆಗ ವಿಡಂಬನಕ್ಕೆ ಸಮಂಜಸವಾದ ಆಹಾರ ದೊರೆತಂತೆ. ಅದುವರೆಗೂ ಹಸಿದ ಸಿಂಹದಂತೆ ಅದು ಸೊರಟಿಕೊಂಡಿರುವುದು ಮೇಲು. ಜಾರ್ಜ್ ಮೆರಿಡಿತ್ತನು "ಅಹಂಕಾರಿ"ಯೆಂಬ ಕಾದಂಬರಿಯನ್ನು ಪ್ರಕಟಿಸಿದಾಗ ಒಬ್ಬ ಯುವಕನು ಅವನಲ್ಲಿಗೆ ಹೋಗಿ, "ಏನು, ವಿಲ್ಲೋಬಿ ಪಾತ್ರದಲ್ಲಿ ನನ್ನನ್ನು ಸ್ಪಷ್ಟ

ಹಾಸ ಮಾಡಿದ್ದೀಯೆ?" ಎಂದು ಆಕ್ಷೇಪಿಸಲು, ಅವನು ಉತ್ತರ ಕೊಟ್ಟನಂತೆ: "ಹಾಗಲ್ಲ, ಮಿತ್ರ, ಪ್ರತಿಯೊಬ್ಬನೂ ವಿಲ್ಲೋಬಿ!" ವ್ಯಕ್ತಿಯೊಬ್ಬನ ಆಧಾರದ ಮೇಲೆ ಉದಯವಾದರೂ ವಿಡಂಬನ ಕೇವಲ ವೈಯಕ್ತಿಕವಾಗಿ ಉಳಿಯಬಾರದು. ಪುರಾತನ ಗ್ರೀಕರಲ್ಲಿ ಆ ತರಹದ ಹಾಸ್ಯಕ್ಕೆ ಅವಕಾಶವಿತ್ತು; ಆದರೆ ಯಾವ ಕಟ್ಟಳೆ ಸಂಸ್ಥೆಯನ್ನೂ ಅಲ್ಲಗಳೆಯಲು ಹಕ್ಕಿರಲಿಲ್ಲ. ಸಾಕ್ರಟೀಸನನ್ನೊ ಯೂರಿಪೀಡಿಸನನ್ನೊ ಪ್ರಹಸನಕರ್ತ ವಿಪರೀತವಾಗಿ ನಗುಪಾಟಲು ಮಾಡಬಹುದು; ಒಂದು ಹಬ್ಬವನ್ನಾಗಲಿ ಒಂದು ಕಾಯಿದೆಯನ್ನಾಗಲಿ ಮಾತ್ರ ಮುಟ್ಟಕೂಡದು. ಆದ್ದರಿಂದ ಗ್ರೀಕರ ವಿಡಂಬನ ಮಾರ್ಗ ಬಹು ಒರಟು. ಆನಂತರ ಪಶ್ಚಿಮ ಪ್ರಪಂಚವನ್ನು ಆಳಿದ ರೋಮನರ ಆಧಿಪತ್ಯದಲ್ಲಿ ವಿಡಂಬನವು ಲಲಿತಕಲೆಯಾಯಿತು. ಅಲ್ಲಿಂದ ಮುಂದೆ ಎಲ್ಲ ಅವಧಿಗಳಲ್ಲಿಯೂ ಏಕವಚನದ ವಿಡಂಬನ ಹೆಚ್ಚು ಕಡಮೆ ತ್ಯಾಜ್ಯವೆಂದೇ ಅಭಿಪ್ರಾಯ. ಈಚೀಚೆಗೆ ಆ ಕಠೋರನಿಯಮ ಸ್ವಲ್ಪ ಸಡಿಲವಾಗಿ ವ್ಯಕ್ತಿ ವಿಡಂಬನದ ಆನುಕೂಲ್ಯ ಸಾಹಿತ್ಯದ ಗಡಿಯೊಳಗೆ ಪುನಃ ಪ್ರವೇಶಿಸಿದಂತೆ ಕಾಣುತ್ತದೆ. ಚೇಂಬರ್ಲೇನನ ಛತ್ರಿ, ಹಿಟ್ಲರನ ಬುಲಾಕು ಮೀಸೆಗಳು ಎಷ್ಟು ಲೇಖನಗಳಿಗೆ ಇಂಬು ಕೊಟ್ಟಿಲ್ಲ, ಕೊಡುತ್ತಲಿಲ್ಲ! ನಿಶ್ಚಯವಾಗಿ ನೂರಾರು ಜನರಿಗೆ ಅನ್ವಯವಾಗದ ಕಳಂಕ ಯಾವುದಾದರೂ ಇದೆಯೆ, ಚಿತ್ರಗುಪ್ತರು ಹೇಳಲಿ? ಬಾಯಿ ಬಡುಕ, ಗಯ್ಯಾಳಿ ಹೆಂಗಸು, ಮೊಂಡು ಭಿಕ್ಷುಕ, ಪರೋಪಜೀವಿ, ಅಂಜುಬುರುಕ, ಜಗಳಗಂಟಿ, ಸುಳ್ಳು ಸರ್ವಜ್ಞ, ಹೊಗಳು ಭಟ್ಟ, ಬಡಾಯಿ ಕವಿಯೆಂದು ಕೂಗಿದರೆ ಉತ್ತರ ಕೊಡಲು ಹಲವಾರು ಮಂದಿ ಮುನ್ನುಗ್ಗುವುದಿಲ್ಲವೆ? ವಿಡಂಬನಕಾರನಿಗೆ ನಿರುದ್ಯೋಗದ ಹೆದರಿಕೆ ಬೇಡ. ಅಷ್ಟೇ ಅಲ್ಲ. ದಯಾವಿಷ್ಟ ಹೃದಯವೂ ಪ್ರಬಲ ಗೌಣವೆಂದು ವಿಂಗಡಿಸುವ ವಿವೇಚನೆಯೂ ಅವನಿಗೆ ಅಗತ್ಯ. ವಸ್ತುವಿನ ವಿಕೃತ ಭಂಗಿಯನ್ನು ಎಷ್ಟು ನಕ್ಕರೂ ವಸ್ತುವನ್ನು ಕೈಬಿಟ್ಟು ಬಿಡಲಾಗದು. ಕೊನೆಗೆ ತನ್ನ ವೈಪರೀತ್ಯದಿಂದಲೇ ವಸ್ತುವು ಅವನಿಗೆ ಪ್ರಿಯಕರವಾಗಬೇಕು. ಕೆಲವು ವಿಡಂಬನಕಾರರಿಗೆ ಸಮಾಜದ ಕುಂದು ಕೊರತೆಗಳು ಅಪರಿಮಿತ ಆಕರ್ಷಣೀಯ. ಕುಶಲಿ ವೈದ್ಯರು ದೊಡ್ಡ ಬಾವುಗಳನ್ನೂ ಹಳೆಯ ಜಾಡ್ಯಗಳನ್ನೂ ಕಂಡು ಚಕಿತರಾಗುತ್ತಾರಂತೆ, ಉಲ್ಲಾಸಪಡುತ್ತಾರಂತೆ! ಥ್ಯಾಕರೆಯ ಒಂದು ನಾಣ್ಣುಡಿಯು ವಿಡಂಬನಕಾರನಿಗೆ ಉಪಯುಕ್ತ ಉಡುಗೊರೆ: "ಹಾಸ್ಯ ಒಳ್ಳೆಯದು, ಸತ್ಯ ಹೆಚ್ಚು ಒಳ್ಳೆಯದು, ಪ್ರೇಮ ಅತ್ಯಂತ ಒಳ್ಳೆಯದು." ಸತ್ಯವಾದಿಯಾದರೂ ಪ್ರಿಯವಾದಿಯಾಗಬಾರದೆ?

ಮಹಾಕವಿ ಹಯನೆಯ ವಿವರಣೆಯಂತೆ ವಿಡಂಬನಕ್ಕೆ ನ್ಯಾಯವೇ ಅಮ್ಮ, ಪ್ಯಾನಸೀ ಅಪ್ಪ. ತಾಯಿಯು ಸಿಂಹಾಸನ ಮಂಡಿತಳಾದ ದೇವಿ; ಸಮೃದ್ಧಿಯ ಪೂರ್ಣಕುಂಭ ಅವಳ ಬಲದ ಕೈಯಲ್ಲಿ, ಎಡದ ಕೈಯಲ್ಲಿ ತೂಗುವ ತಕ್ಕಡಿ, ತೊಡೆ

ಗಳ ಮೇಲೆ ಅಡ್ಡಲಾಗಿಟ್ಟದೆ ಒಂದು ಬಿಚ್ಚುಕತ್ತಿ. ತಂದೆಗಾದರೋ ಚಪ್ಪಟೆ ಮೂಗು, ಚೂಪಾದ ಕಿವಿ, ಹೋತನ ಹೆಜ್ಜೆ, ಕುದುರೆಯ ಬಾಲ; ಅವನು ವಿಷಯ ಲಂಪಟನೂ ನೃತ್ಯ ಸಂಗೀತಗಳಲ್ಲಿ ತೀವ್ರಾಸಕ್ತನೂ ಆಗಿ, ಕೊಳಲನ್ನು ಮನೋಹರ ವಾಗಿ ಬಾರಿಸುತ್ತ ವನದಲ್ಲಿ ವಿಹರಿಸುವ ಅರ್ಧ ದೇವತೆ, ಅರ್ಧ ಪಶು. ಅಂದರೆ ವಿಡಂಬನಕ್ಕೆ ಅನುವಂಶಿಕವಾಗಿ ಒಂದು ಕಡೆಯಿಂದ ನಿಷ್ಪಕ್ಷಪಾತ, ಋಜುತ್ವ, ಖಂಡಿತ ಜಾಯಮಾನ, ಮತ್ತು ಧೈರ್ಯ ದತ್ತವಾಗಿದೆ. ಇನ್ನೊಂದು ಕಡೆಯಿಂದ ಸ್ವಾತಂತ್ರ್ಯ, ಲವಲವಿಕೆ, ಭಯಾನಕ ಸ್ವರೂಪ, ಇಂಪು ಮತ್ತು ವಶೀಕರಣ ಶಕ್ತಿ ಉಂಟಾಗಿದೆ. ತಾಯಿಯ ಖಡ್ಗದಿಂದ ಅನಿಷ್ಟವಾದ್ದನ್ನು ಕತ್ತರಿಸುವುದು, ಛಿನ್ನ ಭಿನ್ನವಾದ ಅದಕ್ಕೆ ತಂದೆಯ ವೇಣುವಾದ್ಯದಿಂದ ಸುಖಮರಣವನ್ನಾಗಿಸುವುದು—ಇದು ವಿಡಂಬನದ ದ್ವೈತ ಪದ್ಧತಿ. ಕುಹಕ ಕ್ರೌರ್ಯಗಳ ಖಂಡನೆಯೇ ವಿಡಂಬನದ ಏಕೋದ್ದೇಶ, ದುರ್ಗುಣವನ್ನು ಧ್ವಂಸಗೈದಲ್ಲಿ ಅದು ಕೃತಕೃತ್ಯವಾಯಿತು, ಎಂಬುದು ಒಂದು ಪಂಗಡ. ಮತ್ತೆ ಕೆಲವರ ಮತದಲ್ಲಿ ಅದಕ್ಕೆ ಉಪಾಧ್ಯಾಯನ ಸ್ಥಾನ: ಗುದ್ದುವುದೇ ಅಲ್ಲದೆ ತಿದ್ದುವುದೂ ಅದರ ಕರ್ತವ್ಯವೆಂಬ ನಂಬಿಕೆ. ಅದು ಹೇಗಾದರೂ ಇರಲಿ. ವಿಡಂಬನವು ಸಾಹಿತ್ಯ ದರ್ಜೆಗೆ ಸೇರಲಿಚ್ಛಿಸಿದರೆ ಅದರಲ್ಲಿ ರಮಣೀಯತೆ ಸ್ಫುಟವೂ ಶಂಕಾತೀತವೂ ಆಗಿರಬೇಕು. ಶ್ರೇಷ್ಠ ವಿಡಂಬನದ ಪ್ರಧಾನ ಸೋಜಿಗ ಅದು. ಸಾಹಿತ್ಯ ಪ್ರಭೇದಗಳಲ್ಲಿ ವಿಡಂಬನ ತೀರ ವಿಶಿಷ್ಟವಾದುದು. ಅದು ಪ್ರತಿಪಾದಿಸುವ ವಿಷಯ ಅನೀತಿಯ ಆಕಾರದ್ದು, ಮಲದೂಷಿತವಾದ್ದು, ಅಂದಗೇಡಾದ್ದು; ಅದರ ನಾಯಕ ದುರುಳ, ದಡ್ಡ, ಅನಾಚಾರಿ, ಅವಿವೇಕಿ. ಯಾವುದೋ ಅವಧಿಯ, ಯಾವುದೋ ಜನಪದದ ಅವಲಕ್ಷಣವನ್ನು ಅದು ಹೇಳಿ ಹಳಿದರೂ, ಸರ್ವಸಾಮಾನ್ಯವಾದ ಮನುಷ್ಯತ್ವಕ್ಕೆ ಅದನ್ನು ಏರಿಸಿ, ಅದರ ಗ್ರಾಂಥಿಕ ಅವತಾರ ಎಲ್ಲರಿಗೂ ಯಾವಾಗಲೂ ಹಿತವಾಗುವಂತೆ ಎಸಗಬಲ್ಲುದು. ಆದ್ದರಿಂದಲೇ ವಿಡಂಬನದ ಮಹಾಕವಿಗಳು ಧರ್ಮಸಂಸ್ಥಾಪಕರ ಹಾಗೆ ಅತಿ ವಿರಳ; ಆಗೊಬ್ಬ ಈಗೊಬ್ಬ ಅಷ್ಟೆ: ಹಾರೇಸ್, ಜುವೆನಲ್, ವಾಲ್ಟೇರ್, ಸ್ವಿಫ್ಟ್, ಹಯನೆ, ಬಟ್ಲರ್, ಆನಟೋಲ್ ಫ್ರಾನ್ಸ್. ಸ್ತುತಿಗೈದು ಸುಳ್ಳುಹೇಳಿ ಮುಗಿಲ ಮಹಲನ್ನು ಹರಡಿ ಭಲೇ ಎನ್ನಿಸಿಕೊಳ್ಳುವುದು ಕವಿಗೆ ಸುಲಭ. ಜಗತ್ತಿನಲ್ಲಿ ಸಿಹಿಯಿದೆ, ಸುಗಂಧವಿದೆ; ಮನುಜ ಮನ್ನಣೆಗೆ ಯೋಗ್ಯ; ಇಹದಲ್ಲಿ ಮಮತೆಯನ್ನಿಟ್ಟರೆ ಕೇಡಲ್ಲವೆಂದು ಉದ್ಘೋಷಿಸುವವನನ್ನು ಯಾರು ತಾನೇ ಮೆಚ್ಚರು? ಆದರೆ ಬಾಳಿನ ಕಶ್ಮಲವನ್ನು ಕೆದಕಿ, ಮನುಷ್ಯನಲ್ಲಿ ಪಶುತ್ವವನ್ನು ಬೆದಕಿ, ಆದರೂ ಕೃತಿಯಲ್ಲಿ ಸಾಹಿತ್ಯ ಸಹಜವಾದ ಸಂತೋಷವನ್ನು ಈಯುವುದು ಕರಕಷ್ಟ. ಅಲ್ಲದೆ ಅಸಮಗ್ರತೆ ವಿಡಂಬನ ಪಂಥದಲ್ಲಿ ಘೋರ ಪಾತಕ. ಕೀಳುವರ್ಗದ ಕತೆಗಾರ ಇಹವನ್ನು ಗೆದ್ದು ಪರವನ್ನು ದಕ್ಕಿಸಿಕೊಳ್ಳಬಲ್ಲ; ಅಸಮರ್ಥ ವಿಡಂಬನಕಾರನಿಗೆ ಕಾದಿರುವ ನರಕಕ್ಕೆ

ಯಾವ ಹೆಸರು! ಈಸಾಪನ ಕಥೆಯಲ್ಲಿ ಒಂದು ಹಾವು ಉಕ್ಕಿನ ಅರವನ್ನು ಸಾಯುಂ ಕಾಲವೆಲ್ಲ ಕಡಿಯಿತಂತೆ; ಅದೇಕೆ ಹಾವಾಗಿ ಹುಟ್ಟಿತೊ, ಎರೆ ಹುಳುವಾಗಿದ್ದರೆ ಚೆನ್ನಾಗಿತ್ತು! ತೀವ್ರಗಾಮಿಯಾಗಲೀ ಮಂದಗಾಮಿಯಾಗಲೀ ವಿಡಂಬನಕಾರನು ತನ್ನ ನೆಲೆಯನ್ನು ಮುಟ್ಟಲೇಬೇಕು; ಇಲ್ಲದಿದ್ದರೆ ಅವನ ಪಾಡೊಂದು ಪಾಡೆ! ತಲೆಕಡುಕ ಚಂದ್ರಹಾಸವೊಂದನ್ನು ಕಂಡುಹಿಡಿದ ಗಿಲ್ಲೊಟೀನನು ತಾನೇ ಅದಕ್ಕೆ ಬಲಿ ಬಿದ್ದಂತೆ, ಕನಕನ ಬೇಳ್ವೆ ಕನಕನನ್ನೇ ತಿಂದಂತೆ, ಅಧಮ ವಿಡಂಬನ ವಿಡಂಬನ ಕಾರನನ್ನೇ ಅಸಾಧ್ಯ ಅಪಹಾಸ್ಯಕ್ಕೆ ನೂಕುವುದು.

ಮಾತೆಯ ಕರವಾಳವೊಂದೇ ವಿಡಂಬನದ ಆಯುಧವಲ್ಲ. ಅದರ ಭಂಡಾರ ಅನೇಕ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತವಾಗಿದೆ. ಇಲ್ಲದಿದ್ದರೆ ಗತಿ ಎಂತು? ಅದರ ರಿಪು ರಕ್ಕಸ ತನ್ನ ಮಾಯಾ ವಿದ್ಯೆಯಿಂದ ನೂರಾರು ರೂಪಗಳನ್ನು ಧರಿಸಬಲ್ಲುದು; ಎದುರಾದ ವೈರಿಗೆ ತಕ್ಕ ಹಂಚಿಕೆಯನ್ನು ಹೂಡದಿದ್ದರೆ ವಿಡಂಬನದ ಶ್ರಮ ವ್ಯರ್ಥ. ಜುವೆನಲ್ಲನ ಭೀಕರ ಪರಿಹಾಸ್ಯಕ್ಕೆ ಚಂಡ ಕೋಪವೇ ಅಡಿಗಲ್ಲು; ನಿಂದೆಯ ಪರಿಘ ಭಿಂಡಿವಾಲಗಳನ್ನು ಅವನು ನಿರ್ದಯೆಯಿಂದ ಬೀಸುತ್ತಾನೆ. ನರ ಸಮೂಹದ ವಿಷಯದಲ್ಲಿ ಸ್ವಿಫ್ಟನು ವೀರ ವೈಮನಸ್ಯವನ್ನು ತಾಳಿದ್ದರಿಂದ ಕಟಕಿ ಮುಂತಾದ ಕರುಳು ಚುಚ್ಚುವ ಮಾರ್ಮಿಕ ಹಾಸ್ಯದ ಶಲ್ಯ ಅವನಲ್ಲಿ ಹೇರಳ. ವಾಲ್ಟೇರ್ ತಡೆಯಿಲ್ಲದೆ ಕಳುಹಿಸುವುದು ಅಸಾಧ್ಯ ಅವಹೇಳನದ ಶರ ನಾರಾಚ ಪರಂಪರೆ. ಹಾರೆಸ್ ಮೊದಲಾದವರು ಸ್ವಲ್ಪ ಕಹಿ ಹೆಚ್ಚು ಸಿಹಿಯಾದ ಗುಳಿಗೆ ಗಳನ್ನು ನಮಗೆ ಉಣಿಸುತ್ತಾರೆ. ಒಮ್ಮೊಮ್ಮೆ ಕಪಟವು ಕಲ್ಲಿನಂತೆ ಗಡುಸಾಗಿ ಹೋಗುತ್ತದೆ; ಆಗ ತೀಕ್ಷ್ಣ ವಿಡಂಬನದ ಕರ್ಕಶ ಉಳಿ ಆವಶ್ಯಕ. ಮತ್ತೆ ಕೆಲವು ಕಡೆ ಆತ್ಮವಂಚನೆಯು ಹೆಪ್ಪುಗಟ್ಟಿ, ಪದರದಮೇಲೆ ಪದರ ಬೆಳೆದು, ಕಟುವಾಗಿ ಬಿಡುತ್ತದೆ; ಬಟ್ಲರನ ಹಾಗೆ ನಾಜೋಕು ನಗುವೆಂಬ ದ್ರಾವಕವನ್ನು ತೊಟ್ಟು ತೊಟ್ಟು ಬಿಟ್ಟು ಆ ಜಡತ್ವವನ್ನು ಕರಗಿಸಬೇಕು. ಬರಿಯ ಜಂಬದಕೋಳಿಯಾದರೆ ಅಡಿಸನ್ನಂತೆ ಲಲಿತಹಾಸದ ಎರಡು ಬೆಟ್ಟಿನಲ್ಲಿ ಆ ಜಂಬದ ಕುಲಾವಿಯನ್ನು ಆಚೆಗೆ ಎತ್ತಿ ಎಸೆದರೆ ಸಾಕು. ಅಹಂಕಾರಿಗೆ ಅನುಕರಣದ ಕನ್ನಡಿಯನ್ನು ಮುಂದೆ ಹಿಡಿ ಯುವುದು ಸಮಂಜಸ. ಗರ್ವದ ಎರಕಕ್ಕೆ ಸತ್ಯ ಕೊಡತಿಯ ಪೆಟ್ಟು ಸೂಕ್ತ. ಇಂತು ಆಯಾ ಸಂದರ್ಭಕ್ಕೆ ಅನುಗುಣವಾದ ಉಪಾಯದಿಂದ ಅಸಹ್ಯವನ್ನು ತಡೆ ಗಟ್ಟಿ ಧರಿತ್ರಿಯನ್ನು ಬೆಳಗುವುದು ವಿಡಂಬನದ ಉಪಕಾರ. ವಿಡಂಬನ ಮಹೀ ಪತಿಗೆ ಹಾಸ್ಯವೇ ದೇವಿ, ಕಟಕಿ ವ್ಯಂಗ್ಯ ಅವಹೇಳನ ನಿಂದೆ ಚಲ್ಲಾಟ ಮೊದಲಾ ದುವು ಭಟ್ಟಿನಿಯರು.

ಉಪ್ಪು ಹುಳಿ ಉಂಡು ಉಸಿರೆಳೆಯುವ ದೇಹಕ್ಕೆ ಕುಂದು ಕೊರತೆಗಳು ಸ್ವಾಭಾವಿಕ: ತಪ್ಪಿಲ್ಲದ ಅಪ್ಪಯ್ಯ ಆವನಿದ್ದಾನೆ? ಪರಿಪೂರ್ಣವಾದ ನರನಿರ್ಮಿತ

ಯಂತ್ರವಾವುದಿದೆ? ಎಲ್ಲವನ್ನೂ ವಿಡಂಬನಗೈಯತೊಡಗಿದರೆ ಗತಿಯೇನು? ಕೊನೆಯೆಲ್ಲಿ? ವಿಡಂಬನವು ಮಾಲಿನ್ಯದ ವಿಚಾರದಲ್ಲಿ ಅಸಹಿಷ್ಣುವಾದರೂ ಬರಿಯ ತಿರಸ್ಕಾರಕೂಪದಲ್ಲಿ ತಳ್ಳಿಬಿಡಬಹುದಾದ ಕೊಳೆಗಳ ಗೋಜಿಗೆ ಅದು ಹೋಗುವುದೇ ಇಲ್ಲ. ತಮ್ಮ ಪಾಡಿಗೆ ತಾವು ಮಾರ್ಗದ ಅಂಚಿನಲ್ಲಿ ನಡೆಯುತ್ತಿದ್ದರೆ ಅಲ್ಪ ದೋಷಗಳಿಗೆ ಏನೂ ಭಯವಿಲ್ಲ; ಅದನ್ನು ಬಿಟ್ಟು ಡಂಭದ ಮುರುಕು ಮೋಟಾರಿನಲ್ಲಿ ಕುಳಿತು ಮಾರ್ಗದ ಮಧ್ಯದಲ್ಲಿ ಮೆರವಣಿಗೆ ಹೋಗುವ ಅಭ್ಯಾಸವನ್ನು ಕೈಕೊಂಡಾಗ ಅವು ವಿಡಂಬನಘರ್ಷಣೆಗೆ ಪಕ್ಕಾಗುತ್ತವೆ. ಗೂನುಬೆನ್ನನ್ನೋ ವಕ್ರನಾಸಿಕವನ್ನೋ ನೋಡಿದರೆ ಸಾಮಾನ್ಯವಾಗಿ ಮರುಕ ಜನಿಸುವುದು. ಆದರೆ ಗೂನುಬೆನ್ನು ತಾನು ಪ್ರತಾಪಸಿಂಗನೆಂದೂ ವಕ್ರನಾಸಿಕ ತಾನು ನೂರ್ಜಹಾನಳೆಂದೂ ನಟಿಸಲು ಪ್ರಯತ್ನಿಸಿದರೆ ಆಗ ನಾಚಿಕೆಗೇಡು, ಅವು ನಗೆಗೆ ಈಡು. ಸೌದಿಯು ತಾನು ಕವಿಪುಂಗವನೆಂದು ಒಣಗರ್ವ ಕೊಚ್ಚದಿದ್ದರೆ ಬೈರನ್ನನ ಸಾಯಸರಸಕ್ಕೆ ಕಾರಣವಿರುತ್ತಿರಲಿಲ್ಲ. ದುರ್ಭರಯೋಧನೆಂದು ಕನಸು ಕಂಡು ಉಬ್ಬಿಹೋದ ದುಶ್ಶಲೆಯಾಣ್ಮ ಅಗ್ನಿಪುತ್ರಿಯನ್ನು ಹಿಡಿಯಹೋದದ್ದರಿಂದಲ್ಲವೆ ತಲೆಚಿಪ್ಪಿನ ಮೇಲೆ ಸುಣ್ಣದ ಪಟ್ಟೆ ಬಂದದ್ದು? ಮರ್ತ್ಯನಾದ ಸಾಲ್ಮೋನಿಯಸ್ಸು ತಾನು ದೇವಾದಿದೇವನೆಂದು ಡಂಗೂರ ಹೊಯಿಸಿ, ಪ್ರಜೆಗಳಿಂದ ಹವಿಸ್ಸನ್ನು ಸ್ವೀಕರಿಸಲಾರಂಭಿಸಿ, ತಾನು ಕಂಡುಹಿಡಿದ ಹೂಬಾಣ ದಢಾಕಿಗಳನ್ನು ಜ್ಯೂಸನ ಗುಡುಗು ಸಿಡಿಲೆಂದು ಕೂಗಿಕೊಂಡಾಗ ಒಲಿಂಪಸ್ ಸ್ವರ್ಗದಿಂದ ಬರಸಿಡಿಲು ಬಿದ್ದು ಅವನನ್ನು ಕರಿಕುಮಾಡಿತು. ತಾನಾರು, ತನ್ನ ಪರಿಮಿತಿಯಾವುದು, ಎಂಬುದನ್ನು ಅರಿತ ನಮ್ರಜೀವಿಯನ್ನು ವಿಡಂಬನ ಬಾಧಿಸದು. ಮರದ ರೆಕ್ಕೆಗಳನ್ನು ಮೇಣದಿಂದ ಅಂಟಿಸಿಕೊಂಡು ಸಮುದ್ರವನ್ನು ಹಾರತೊಡಗಿದ ಐಕರಸ್ಸು ಸೂರ್ಯನ ಶಾಖದಿಂದ ಮೇಣ ಕರಗಿ ರೆಕ್ಕೆಯುದುರಿ ಜಲಸಮಾಧಿಯಲ್ಲಿ ಮುಳುಗದೆ ಮತ್ತೇಂತು? ನೊಣವನ್ನೂ ಗುಬ್ಬಚ್ಚಿಯನ್ನೂ ಯಾರೂ ಅಣಕಿಸಹೋಗುವುದಿಲ್ಲ. ಚಕ್ರದ ಮೇಲೆ ಕುಳಿತ ನೊಣ "ನಾನು ಎಷ್ಟು ಧೂಳನ್ನು ಎಬ್ಬಿಸುತ್ತಿದ್ದೇನೆ!" ಎಂದು ವಿಜೃಂಭಿಸಿದರೆ, ಆನೆಯ ಮೇಲೆ ಕೂತು ಗುಬ್ಬಚ್ಚಿ "ನಿನಗೆ ಭಾರಮಾಡಿದ್ದಕ್ಕೆ ಕ್ಷಮಿಸು!" ಎಂದು ನಿರೂಪಿಸಿದರೆ, ಅವುಗಳ ಭ್ರಾಂತಿ ವಿಡಂಬನಕ್ಕೆ ಕೈಬೀಸಿ ಸನ್ನೆಮಾಡುತ್ತದೆ. ಮಾರೀಚ ಚಿನ್ನದ ಸಾರಗವಾಗದೇ ಗುಟ್ಟಿನಲ್ಲಿ ಇದ್ದುಕೊಂಡಿದ್ದರೆ ರಾಮನ ಬಾಣ ಅವನ ಮೈಯಲ್ಲಿ ನಡುತ್ತಿರಲಿಲ್ಲವೋ ಏನೊ! ಡ್ರೈಡನ್ ಪೋಪ್ ಮೊದಲಾದ ಪ್ರತಿಭಾನ್ವಿತರು ಮೌಢ್ಯದ ನೆತ್ತಿಯಮೇಲೆ ವಿಡಂಬನೆಯ ಆಲಿಕಲ್ಲು ಮಳೆಗರೆದಿದ್ದಾರೆ. ಸಾಹಿತ್ಯಧರೆಯಲ್ಲಿ ಹೆಡ್ಡತನಕ್ಕೂ ಧೀಶಕ್ತಿಗೂ ಹರಿಯದ ನಿರಂತರ ಹೋರಾಟ. ಇಲ್ಲಿಯೂ ಕಾರಣವೊಂದೇ: ಪರಾಕ್ರಮವಿಲ್ಲದ ಪ್ರತಿಷ್ಠೆ!

ಅದೃಷ್ಟವಶದಿಂದ ಇಳೆಯ ಚರಿತ್ರೆಯಲ್ಲಿ ವಿಡಂಬನವಿಲ್ಲದ ತಲೆಮಾರು ಭೂಭಾಗ ಅಗೋಚರ. ಕೊನೆಗೆ ವಿಡಂಬನ ಅಲಂಕಾರವನ್ನು ಕಳಚಿಟ್ಟ ದೊಡ್ಡ ಕಾವ್ಯವೂ ಅಪೂರ್ವ. ಕನ್ನಡದಲ್ಲಿ ಅಧಮಕವಿ ಧಿಕ್ಕಾರ ಮೊದಲಿನಿಂದಲೂ ಒಂದು ಕವಿಸಂಕೇತವಲ್ಲವೆ? ನೃಪತುಂಗನ "ಮುತ್ತು ಮೆಣಸಿನ ಹಾರ", "ಕೂಸಿನ ತಲೆಯ ಮೇಲಣ ಬಿಣ್ಪೊರೆ"ಯೆಂಬ ಉಪಮಾನಗಳು; ಪಂಪನ "ಕವಿವ್ಯಾಸನೆನೆಂಬ ಗರ್ವಮೆನಗಿಲ್ಲ"; ರನ್ನನ "ಜಳದೊಳ್ ಮೀನಿರ್ದವೊಲಕ್ಕಟಾ ಕೋಡಸೇಡಿಂಗೊಳಗಾದೈ"; ಹೊನ್ನಮ್ಮನ "ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು?;" "ಜನ ಮೆಚ್ಚೆ ಶುದ್ಧನಲ್ಲದೆ ಮನಮೆಚ್ಚೆ ಶುದ್ಧನಲ್ಲಯ್ಯಾ!," "ಎನಿಸು ಕಾಲ ಕಲ್ಲು ನೀರೊಳಗಿದ್ದರೇನು? ನೆನೆದು ಮೃದುವಾಗಬಲ್ಲುದೆ?" ಮುಂತಾದ ಶಿವಶರಣರ ವಚನಗಳು; "ಮಡಿ ಮಡಿ ಮಡಿಯೆಂದು ಮೂರ್ವಾರ್ಹಾರುತಿ ಮಡಿಯೆಲ್ಲಿ ಬಂದಿತೆ ಭಿಕನಾಶಿ?", "ದಾನಧರ್ಮಂಗಳನು ಬಿಡುವನೇ ಧರ್ಮಾತ್ಮ; ಗುರುದೈವ ಹಿರಿಯರನು ಬೈಯುವನೆ ನಿಷ್ಠ; ಸಹಜವಿದು ಈ ನುಡಿಯು ಸಟೆಯಲ್ಲ!" ಮುಂತಾದ ವೈಷ್ಣವ ದಾಸರ ಉಕ್ತಿಗಳು; ಸರ್ವಜ್ಞನ "ತಪವ ಮಾಡುವೆನೆಂದು ಗುಹೆಯ ಹೊಕ್ಕಿರಬೇಡ ತಪದಲ್ಲಿ ಕುಪಿತ ಬಿಡದಿರಲು ಯಾವ ತಪ ತಾಪ ಕಂಡ್ಯ!" "ಅತ್ತಿಯ ಮರ ಕಾಯಿ ಹೊತ್ತಿರ್ದ ತೆರನಂತೆ ತತ್ವ ಭೇದಗಳನರಿಯದಲೆ ರುದ್ರಾಕ್ಷಿ ಹೊತ್ತು ಫಲವೇನು?" ವೃತ್ತವಿಲಾಸನ "ಪೆರರಂ ಬೇಡುವ ದೈವಮೇಕೆ ಗಡ ಪೇಳಾ ತೋಳನಿಂ ಕಷ್ಟಮೇ?" ಬ್ರಹ್ಮಶಿವನ "ಇದು ಯುಕ್ತಮಪ್ಪುದಲ್ಲೆನ್ನದೋತಿ ತಲೆ ಮೇಲೆ ಬೀಳೆ ಬೋಳಿಪರಾ ಅಂದದ ಬುದ್ಧಿಮಂತರಂತದು ತುದಿಮೂಗಿನ ಮೇಲೆ ಬೀಳ್ವೊಡದನೇಗೆಯ್ವರ್?" ಮಧುರ ಕವಿಯ "ನೀಚಂಗೆ ವಾಗ್ಬಲದಿಂ ಬಂಟಿನ ನಂಟಿನಗ್ಗಳಿಕೆಯಿಂದೆಗ್ಗೆನ್ನದುರ್ವೆಳ್ದು ಗಾವಿಲನೊರ್ವಂ ಕುಡೆ ಕೊಂಡ ತೊಂಡುವೆಸರಿಂದೇಂ ಸಲ್ವುದೇ ನಿಲ್ವುದೇ?" ಮುದ್ದಣನ "ಪದ್ಯಂ ವಧ್ಯಂ ಗದ್ಯಂ ಹೃದ್ಯಂ!" ರಂಗನಾಥನ "ಲಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡೊಡೆ ಸಾಲದೇ ಸಂಸ್ಕೃತದಲಿನ್ನೇನು?"—ಹೀಗೆ ಕನ್ನಡ ಸಾಹಿತ್ಯದಲ್ಲಿ ವಿಡಂಬನ ಗಾಳಿ ಬೀಸುತ್ತಲೇ ಇದೆ. ಆದರೆ ಆರಂಭದಿಂದ ಮುಕ್ತಾಯದವರೆಗೆ ವಿಡಂಬನವನ್ನೇ ಅವಧಾನದಲ್ಲಿಟ್ಟಿರುವ ಕಾವ್ಯ ಯಥೇಚ್ಛವಾಗಿ ಹುಟ್ಟಬೇಕಾದರೆ ಸಮಯ ಸನ್ನಿವೇಶಗಳು ತುಂಬ ಕೆಟ್ಟು ಕೊಳೆತು ನಾರುತ್ತಿರಬೇಕು. ತನ್ನ ಯುಗವನ್ನು ಜುವೆನಲ್ಲನು ಹೀಗೆ ವರ್ಣಿಸಿದ: "ಅಪಚಾರಗಳ ಪೈರು ಈಗ್ಗಿಂತ ಇನ್ನಾವಾಗ ಅಧಿಕವಾಗಿತ್ತು? ಮುಂದಿನ ಶತಮಾನಗಳಿಗೆ ಹೊಸ ದೋಷವಾವುದೂ ಉಳಿದಿಲ್ಲ; ಈಗಾಗಲೇ ಕೆಟ್ಟುದರ ಪಟ್ಟಿ ಪರಿಪೂರ್ಣವಾಗಿಬಿಟ್ಟಿದೆ!" ವಾಲ್ಟೇರ್ ಬಂದಾಗ ಫ್ರಾನ್ಸೂ, ಬಟ್ಲರ್ ಬಂದಾಗ ಇಂಗ್ಲೆಂಡೂ ಗಗಲ್ ಬಂದಾಗ ರಷ್ಯವೂ ಅದೇ ರೀತಿ ಇದ್ದುವಲ್ಲವೆ? ಅವರೂ ಜುವೆನಲ್ಲನ ಶಬ್ದಗಳಲ್ಲಿಯೇ ತಂತಮ್ಮ ತಾಯ್ನಾಡುಗಳನ್ನು ಪ್ರಶಂಸಿಸಬಹುದಾಗಿತ್ತು.

ಹಿರಿಯ ವಿಡಂಬನಕಾರ ನಿರ್ಮತ್ಸರನೂ ಶುಭ್ರಚಿತ್ತದವನೂ ಕಾರ್ಯದಕ್ಷನೂ ಆದ ಸಂಭಾವಿತ ಪುರುಷ. ಕಾವ್ಯೋದ್ದೇಶದಲ್ಲಿ ಕಿಂಚಿದ್ವಿಷವಾಗಲೀ ಕೈಚಳಕದಲ್ಲಿ ಕೊಂಚ ಊನವಾಗಲೀ ಇದ್ದಲ್ಲಿ ಅವನು ಕಟ್ಟುಕಥೆಯನ್ನೊ ಕಾಕುಪದ್ಯವನ್ನೊ ಲಿಖಿಸಲಾರಂಭಿಸುವುದು ಕ್ಷೇಮ. ಮಹಾ ವಿಡಂಬನ ಪರಮೇಶ್ವರನ ಪಾಶುಪತಾಸ್ತ್ರ: ಅದಕ್ಕೆ ಗಾಂಡೀವಿಯೇ ಸಮನಾದ ಬಿಲ್ಗಾರ; ಅವನಿಗೂ ತಪಸ್ಸು ಮಾಡಿದ ಮೇಲೆ ಅದರ ಸಿದ್ಧಿ. ಹಾಗೆಯೇ ವಿಡಂಬನವನ್ನು ಬಗೆದು ಸಂತಸಪಟ್ಟು, ಆತ್ಮಜ್ಞಾನವನ್ನು ಆರ್ಜಿಸದವನಲ್ಲಿ ನಾಗರಿಕತೆಯೇ ಲುಪ್ತ. ಅವನೇಕೆ ಹಳ್ಳಿಯಲ್ಲಿಯೊ ಹಳುವದಲ್ಲಿಯೊ ಬದುಕಿರಬಾರದು? ಕೊಳಕುಗಳು ಕಚ್ಚಿಕೊಂಡು ಬಹಳ ಆಲಸ್ಯವಾದಾಗ ನಾಯಿಯು ಗರಿಕೆಯನ್ನು ಕಡಿದು ಕಡಿದು ತನ್ನ ಶರೀರವನ್ನು ಶುಚಿಮಾಡಿಕೊಳ್ಳುವುದಂತೆ! ಹಾಗೆಯೇ ಜನರೂ ಜನತೆಯೂ ಆಗಾಗ ವಿಡಂಬನ ಔಷಧಿಯನ್ನು ಕುಡಿಯುವುದರಿಂದ ಗುಣ ಹೆಚ್ಚು, ಅಪಾಯವಿನಿತಿಲ್ಲ. ವಿಡಂಬನವು ಎಂದಿಗೂ ಸರಳತೆ, ಸತ್ಯ, ಸೌಂದರ್ಯಗಳ ಶತ್ರುವಲ್ಲ. ಅವು ಉಳಿಯಬೇಕಾದರೆ, ತಮ್ಮ ಸತ್ವವನ್ನು ಪ್ರದರ್ಶಿಸಬೇಕಾದರೆ, ಅಮರತ್ವವನ್ನು ಸಂಪಾದಿಸಬೇಕಾದರೆ, ವಿಡಂಬನೆಗೆ ಒಳಗಾಗಿ ಪರೀಕ್ಷೆ ಕೊಡುವುದು ಉತ್ತಮ. ರಾಹುವಿನ ದವಡೆಯನ್ನು ದಾಟಿಬಂದ ತರುವಾಯ ಆದಿತ್ಯನ ತೇಜಸ್ಸು ನಿರ್ವಿವಾದ. ಯಾವುದನ್ನು ವಿಡಂಬನ ನಗೆಪಾಟಲು ಮಾಡಿ ಚದುರಿಸಲಾರದೋ ಅದೇ ಅಲ್ಲವೆ ಸತ್ಯವಾದ್ದು, ಸ್ಥಿರವಾದ್ದು, ಮಹತ್ವವಾದ್ದು !

ಬೆಂಗಳೂರು,
೧೧-೧೨-೧೯೩೯.

ಎಸ್. ವಿ. ರಂಗಣ್ಣ.

# FOREWORD

My dear G. P. R.,

* * * * * * I hope I am not late for whatever you want my foreword. You asked for it! With G. P. Notes, wouldn't it be valuable?

Yours sincerely,
(in spite of my poetry)
R. V. JAGIRDAR.

Please tell * * that for once in my life somebody inspired me to write in metre - or yard!

* * *

## ಫೋರವರಡ

ಪುರುಷಸರಸತಿಯೆಂಬ ನಾವೆಲ
ಪರಸನ್ಯಾಲಿಟಿಯುಕ್ತ ಪೊಯೆಟನ
ಕರಸರೀ ಗ್ಲಾನ್ಸವನೆ ಮಾಡಿದ ಪಾಮರನು ನಾನು।
ಬರೆಸಲೆಂತೀ ಫೋರವರಡವ
ಒರೆಸಲೋ ಮೇಣ್ ಒತ್ತಕರಡವ
ವೆರಿಸಿಲಿ ಡಿಲೆಮ್ಮಾದ ಹಾರ್ನವ ಮುರಿಸು ಸಿರಿರಂಗಾ ||

ಕರ್ಣಕಿದು ಕ್ಯಾನನವೊ ಮೇಣ್ ವ್ಯಾ
ಕರ್ಣಕಿದು ಫಡ! ಮೆಶಿನು ಗನ್ನೋ
ವರ್ಣಿಸಲಿ ನಾನೆಂತು?—ವಂಡರಫುಲ ಕ್ರಿಯೇಶನ್ನ!।
ಸ್ನೋರ್ಣಿಸ[1]ದೆ ತಾನಾವನಿದನಾ
ಕರ್ಣಿಸುವ ಲಕ್ಕುಳ್ಳನಾತನ
ಕರ್ಣ ದೀರ್ಘಿಪ ಟಿಕ್ಕು—ಕರ್ಣಾಟಕ್ಕು—ಕ್ಯೂ ಈ ಡೀ ||

---

1. Snore+ನ್+ಇಸು.

# G. P. NOTES.

**ಛಾಯೆ :—**

'ಪುರುಷಸರಸತಿ'ಯೆಂಬ novel - personality - ಯುಕ್ತ poetನ cursory - glanceಅನ್ನೆ ಮಾಡಿದ ಪಾಮರನು ನಾನು. ಬರೆಸಲೆಂತು[1] ಈ Fore-word ಅನ್ನು ? ಒರೆಸಲೋ ಮೇಣ್ ಒತ್ತಕರಡವ[2] ? verseಇನಲ್ಲಿ (ಅಥವಾ very silly ? )[3] dilemmaದ horn[4] ಅನ್ನು ಮುರಿಸು, ಶ್ರೀರಂಗಾ.

ಕರ್ಣಕೆ ಇದು cannonಓ? ಮೇಣ್ ವ್ಯಾಕರ್ಣಕೆ ಇದು, ಫಡ, machine-gun ಓ? ವರ್ಣಿಸಲಿ ನಾನೆಂತು–wonderful-creation ಅನ್ನು! Snoreಣಿಸದೆ ತಾನ್ ಆವನ್ ಇದನ್ ಆಕರ್ಣಿಸುವ luck ಉಳ್ಳನ್[5],
ಆತನ ಕರ್ಣ ದೀರ್ಘಿಸಪ ಟಕ್ಕು KARṆĀṬAKಉ[6].

Q. E. D[7].,

**ವ್ಯಾಕರಣಾದಿ ವಿಶೇಷಾಂಶಗಳು :—**

1. ಕರ್ತರಿಕರ್ಮಣಿಪ್ರಯೋಗಪಲ್ಲಟ.—'ಬರೆಸಲೆಂತು'=ಬರೆಯುಲೆಂತು.
2. ವಿಭಕ್ತಿ ಪಲ್ಲಟ:–'ಒತ್ತಕರಡವ'=ಒತ್ತಕರಡದಿ.
3. ಶ್ಲೇಷೆ:–'ವೆರಿಸಿಲಿ ಡಿಲೆಮ್ಮಾದ ಹಾರ್ನವ ಮುರಿಸು'=dilemmaದ hornಅನ್ನು verseಇನಲ್ಲಿ ಮುರಿಸು, ಅಥವಾ very-silly-dilemmaದ hornಅನ್ನು ಮುರಿಸು.
4. ವಚನ ಪಲ್ಲಟ: -'horn' ಅನ್ನು=horns ಅನ್ನು.
5. ಪ್ರಾಕ್ಪ್ರಯೋಗ:–ಉಳ್ಳನ್=ಉಳ್ಳವನು.
6. ಅಂತರಾರ್ಥ:–'ಕರ್ಣ ದೀರ್ಘಿಸಪ ಟಕ್ಕು ಕರ್ಣಾಟಕ್ಕು'=ಕರ್ಣ+ಾ+ಟಕ್ಕು =ಕರ್ಣಾಟಕ್ಕು.
7. Q. E. D.=Quod Erat Demonstrandum=ಸಾಧಿಸಬೇಕಾದುದನ್ನು ಸಾಧಿಸಿದುದಾಯಿತು.

**ಪದಚ್ಛೇದ, ಅನ್ವಯ, ಅರ್ಥ, ತಾತ್ಪರ್ಯ, ಇತ್ಯಾದಿ :—**

ಸುಲಭವಾಗಿದೆ.

# ಆರನೆಯ ಮುನ್ನುಡಿ

ಸರ್ ಸಾವಿರದ ಒಂಭೈನೂರ ಮೂವತ್ತೆಂಟನೆಯ ಇಸವಿಯ ನಡುವಿನಲ್ಲಿ, ಕನ್ನಡದ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡಬೇಕಾದ ನ-ಣ ವ್ಯವಹಾರದ ಉಚ್ಛ್ರಾಯ ಕಾಲದಲ್ಲಿ, ಬೆಂಗಳೂರು ಶಹರಿನಲ್ಲಿ 'ಕನ್ನಡ ಭಾಷೆಗೆ ಗಂಡಾಂತರಗಳು' ಎಂಬ ವಿಷಯವಾಗಿ ಒಂದು ಭಾಷಣ ಏರ್ಪಟ್ಟಿತ್ತು. ಅಂದಿನ ಭಾಷಣಕಾರರು

"ನವೀನ ಕವಿತೆಗಳಲ್ಲಿ ಅನೇಕ ಗುಣಗಳೂ ಇವೆ. ಆದರೆ ವ್ಯಾಕರಣನಿಯಮವನ್ನು ಕಾಪಾಡಬೇಕು ಮತ್ತು ಗ್ರಾಮ್ಯಪದಗಳನ್ನು ಉಪಯೋಗಿಸಿ ಭಾಷೆಯನ್ನು ಕೀಳುದರ್ಜೆಗೆ ಇಳಿಸಬಾರದು. ಬುದ್ಧಿವಂತರಾದವರೇ ಕೆಲವರು ಗ್ರಾಮ್ಯಪದ ಪ್ರಯೋಗ ಮಾಡಿ ಕವಿತೆಯನ್ನು ಮಾಡುತ್ತಾ ಭಾಷಾಸೌಂದರ್ಯವನ್ನೂ ದರ್ಜೆಯನ್ನೂ ಕೆಡಿಸುವುದು ಪರಮ ಅನ್ಯಾಯವನ್ನು ಭಾಷಾಮಾತೆಗೆ ಮಾಡಿದಂತೆ ಆಗುವುದು."

ಎಂದು ನಡುವೆ ನುಡಿದರು. ಈ ಭಾಷಣವಾದ ಒಂದು ತಿಂಗಳನಂತರ ಅದೇ ಭಾಷಣಕಾರರ ಪದ್ಯಾವಲಿಯೊಂದು ಪ್ರಕಟವಾಯಿತು:

ದೇಶಸೇವೆಯೆ ಈಶಸೇವೆಯು
ದೇಶಸೇವೆಯೆ ಪಾಶನಾಶವು
ದೇಶಸೇವೆಯೆ ಭಾವಿಸಲು ಜನಪದವನೇಳಿಪುದು।
ದೇಶಸೇವೆಯನೆಸಗದವನೇಂ
ಕಾಸಿಗುಂ ಕಡೆಯಲ್ತೆ ತೆಗೆ! ತೆಗೆ!
ದೇಶಭಕ್ತರ ಬಾಳೆ, ಬಾಳೆಯದೆಂಬರೀ ಜಗದಿ॥

ತಾತ ನವರೋಜ್, ಖ್ಯಾತ ತಿಲಕ, ವಿ
ನೀತ ದಾಸ್, ನಿರ್ಭೀತ ಲಾಲಜಿ
ಪೂತ ಗೋಖಲೆ, ನೆಹರು, ಮೇಣ್ ವಿಖ್ಯಾತ ಪಾಟೀಲರ್।
ಯಾತಕೋಸುಗ ಹರಣವಿತ್ತರು
ಯಾತಕಾ ಘನಮಹಿಮ ಗಾಂಧಿಯು
ಯಾತನೆಯನನುಭವಿಪನೆಂಬುದ ತಿಳಿಯದವರೇಕೆ॥ ... ಇತ್ಯಂತ,

ಹಿಂದೆ ಕಂದ ವೃತ್ತಗಳಿಗೆ ಕಿರೀಟವಿಟ್ಟು ರಾಜ್ಯವಾಳಿಸಿದರು, ಪಂಪರನ್ನರು. ನಾರಣಪ್ಪ ಕನ್ನಡ ಭಾಮಿನೀಷಟ್ಪದವನ್ನು ಕನ್ನಡ ಭುವನೇಶ್ವರೀ ದೇವಿಗೆ ವಾಹನ ಮಾಡಿಕೊಟ್ಟ. ಒಂದು ಕಾಲಕ್ಕೆ ತಲೆಯ ಮೇಲೆ ಕಿರೀಟ ಹೊತ್ತವರು ಮತ್ತೊಂದು ಕಾಲಕ್ಕೆ ಕಟ್ಟಿಗೆ ಹೊರಬೇಕಾದೀತು; ವಾಹನ ಒಡ್ಡರ ಬಂಡಿಯಾದೀತು. 'ಚಕ್ರಾರಪಂಕ್ತಿರಿವ ಗಚ್ಛತಿ ಭಾಗ್ಯಪಂಕ್ತಿಃ'.

'ಗ್ರಾಮ್ಯಪದಪ್ರಯೋಗ ಮಾಡಿ ಕವಿತೆಯನ್ನು ಮಾಡುತ್ತಾ ಭಾಷಾ ಸೌಂದರ್ಯವನ್ನೂ ದರ್ಜೆಯನ್ನೂ ಕೆಡಿಸಿ ಪರಮ ಅನ್ಯಾಯವನ್ನು ಭಾಷಾಮಾತೆಗೆ ಮಾಡುತ್ತಿದ್ದ' ರತ್ನನು ಪ್ರಾಚೀನ ಭಾಮಿನಿಯ ಈ ನವೀನನವ್ಯತೆಯನ್ನು ಕಂಡು, ನೋಡಲಾರದೆ, 'ಭಾಮಿನಿಯನ್ನು ಮೊದಲಿನಂತೆಯೇ ಬಿಡಬಾರದೇ, ಭಗವಂತಾ!' ಎಂದು ದೇವರಲ್ಲಿ ಮೊರೆಯಿಟ್ಟ. ಅದೇ ಗಳಿಗೆಯೆ 'ಪುರುಷಸರಸ್ವತಿ' ಪ್ರತ್ಯಕ್ಷನಾದ; ಭಾಮಿನಿಯ ಮಾನರಕ್ಷಕನಾಗಿ ನಿಂತ. ಭಾಮಿನಿಯನ್ನು ಬೆನ್ನಟ್ಟಿ ಬಂದವರು ಕೇಳಿದರು, 'ನೀನಾರು?' ಎಂದು. ಮರುಮಾತು ಕೊಟ್ಟ ಮಹಾನುಭಾವ:

ಕಾವಿಯದ ಕೆನೆಹಾಲ ಕರೆಯುವ
ಗೋವು ನಾ ಕನ್ನಡದ ಮಧುಪಕೆ
ಹೂವು ನಾನೀನಾನೆ ಕನ್ನಡ ತಾಯ ಡಿಂಗರಿಗ ॥

ಪೆಸರಿನಲಿ ನಾ ಪುರಿಸ ಸರಸತಿ
ಹಸುರು ಹುಲ್ಲಿನ ಮೇಲೆ ಮಂಜಿನ
ಕುಸುರಿ ಕೆಲಸದ ಕುಶಲಕರ್ಮದ ನುಣುಪು ನಯಗಾರ ।
ಮುಸೆದ ಹಲ್ಲಿನದೆರಡು ಹಿಡಿ ಗರ
ಗಸದ ಕುಯಿತವನಾರ್ಪುದಲ್ಲದೆ
ರಸರಸಾಂತರಗಳನು ಬಣ್ಣಿಸಬಲ್ಲುದೆನ್ನಳವು ॥ ... ಇತಿ ಮಧ್ಯ,

ಇದನ್ನು ಕೇಳಿ, "ಲೋಕ ಬೆರಗಾಯ್ತು!"

ಹೀಗೆ ಲೋಕವನ್ನು ಬೆರಗುಗೊಳಿಸಿದ 'ಪುರುಷಸರಸ್ವತಿ' ತನ್ನ ಮೊದಲನೆಯ ಕಾವ್ಯವಾಗಿ 'ಕರ್ಣನಾಟಕ ಪುರಾಣವು-ಅರ್ಥಾತ್-ಸಾಲಂಕೃತ ಶತಕಾರ್ಧ ಷಟ್ಪದವು-ಎಂಬ-ಣತ್ವೋದ್ಧರಣ ಮಹಾಕ್ಷುದ್ರಕಾವ್ಯಪ್ರಪಂಚವು' ಎಂಬುದನ್ನು ಬರೆದ. 'ನಣ ಪರಾಕ್ರಮಿ'ಗಳ ವಿಷಯವೆ ಇದಕ್ಕೆ ನೆಪವಾಗಿದ್ದರು ಕೂಡ, ಆ 'ಪಾಣಿನಿಯ ಪೈಲ್ವಾನರು', ಆ 'ಕೇಶಿಯ ಗರುಡಿಯಾಳುಗಳು', ಅವರುಗಳಿಂದ ಮಾತ್ರವೇ ಲೋಕ ಉತ್ತಮವಾಗತಕ್ಕದ್ದಲ್ಲ, ಉದ್ಧಾರವಾಗತಕ್ಕದ್ದಲ್ಲ—ಎಂಬ ಇನ್ನೂ ಇತರ ಸಾರಾಸಾರಗಳನ್ನು ವಿವೇಕಿಸುವುದೇ ಈ ವಿಡಂಬನದ ಉದ್ದೇಶ.

"ಪುರುಷ ಸರಸತಿಯ ಸೋಗಿನಲಿ ಸಾಹಿತ್ಯಜೀವನದೀಗಳಿನ ವಿಕೃತಿಗಳನತಿಗಳಲಾಗಹಾಕಿಸುವೀ ಕೃತಿಯು"

ಎಂದು ರತ್ನ ಸ್ಪಷ್ಟವಾಗಿ ತಿಳಿಸಿದ್ದಾನೆ.

ಹೊಸಕಾಲದ ಕವಿಗಳು ಹೊಸ ಹೊಸ ಛಂದಸ್ಸುಗಳನ್ನು ಸೃಷ್ಟಿಮಾಡಿಕೊಳ್ಳುತ್ತಿರುವರಷ್ಟೆ. ನಮ್ಮ ಹಳೆಯ ಛಂದಸ್ಸುಗಳನ್ನು ಉಪಯೋಗಿಸಲು ಕೈಲಾಗದೆ, ಹೀಗೆ ತಮ್ಮ ಮನಸ್ಸಿಗೆ ಬಂದಂತೆ ಬರೆದುಕೊಳ್ಳುತ್ತಿದ್ದಾರೆಂದು ಅನೇಕರು ತಿಳಿದಿದ್ದಾರೆ, ಹಾಗೆಯೇ ಆಡುತ್ತಾರೆ. ಆದರೆ ಈ ಭಾವನೆ ಶುದ್ಧ ತಪ್ಪು. ಹೊಸಬರು

ಹಳೆಯ ಛಂದಸ್ಸುಗಳನ್ನೇ ಪುನಃ ಬಳಸದಿದ್ದರೆ, ಅವರು ಅದರಲ್ಲಿ ಕೈತೋರಿಸಲಾರರೆಂದಲ್ಲ; ಅವರಿಗೆ ಆ ಛಂದಸ್ಸು ಸಾಲದು, ಅವರ ಭಾವ ಭಾಷೆಗಳಿಗೆ ಆ ಛಂದಸ್ಸು ಒಗ್ಗುವುದಿಲ್ಲ. ಅವರಿಗೆ 'ಹಾಡಿದ್ದೇ ಹಾಡೋ ಕಿಸುಬಾಯಿ ದಾಸ' ಮಾಡುವ ಇಷ್ಟವಿಲ್ಲ. ನವನವೋನ್ಮೇಷಶಾಲಿನಿಯಾದ ಪ್ರಜ್ಞೆಯೇ ಪ್ರತಿಭೆಯಲ್ಲವೆ! ಅದಕ್ಕಾಗಿಯೇ ಛಂದಸ್ಸಿನಲ್ಲಿಯೂ ನಾವೀನ್ಯ ವಿವಿಧತೆ ಕಂಡುಬರುವುದು. ಹೊಸಬರಲ್ಲಿ ಅನೇಕರು ಹಳೆಯ ಛಂದಸ್ಸುಗಳಲ್ಲಿಯೂ ಬರೆದು ಸೈಯೆನ್ನಿಸಿಕೊಳ್ಳಬಲ್ಲರೆಂಬುದಕ್ಕೆ ಈ 'ಪುರುಷ ಸರಸ್ವತಿ' ಒಂದು ಸಣ್ಣ ಉದಾಹರಣೆ. "ಗ್ರಾಮ್ಯಭಾಷೆಯಲ್ಲಿ ಕವಿತೆಗಳನ್ನು ರಚಿಸಿ ಭಾಷಾಮಾತೆಗೆ ಅವಮಾನವನ್ನು ಗೆಯ್ದು"ನೆನ್ನಿಸಿಕೊಂಡವನು ಕನ್ನಡ ಭಾಮಿನಿಯನ್ನು ಎಷ್ಟು ಗೌರವವಾಗಿ ನಡಸಿಕೊಳ್ಳಬಲ್ಲನೆಂಬುದಕ್ಕೆ ಈ ಕೃತಿ ಸಾಕು.

ಇದೇ ರೀತಿಯಲ್ಲಿ, "ಪ್ರಾಸವನ್ನಿಟ್ಟು ಬರೆಯಲಾರದೆ ಈಗಿನವರು ಪ್ರಾಸವನ್ನು ಬಿಟ್ಟಿದ್ದಾರೆ" ಎಂದು ಅನೇಕರು ಅರಿಯದೆ ಕೂಗುತ್ತಿದ್ದಾರೆ. ಪ್ರಾಸವಿಲ್ಲದ ಕವಿತೆಗಳನ್ನೂ ಬರೆದಿರುವ 'ಶ್ರೀ', 'ಶ್ರೀನಿವಾಸ', ಬೇಂದ್ರೆ, ಪು. ತಿ. ನ., ಪುಟ್ಟಪ್ಪ ಮುಂತಾದವರು ಇತರ ಕಡೆ ಪ್ರಾಸದಿಂದ ಪ್ರಯೋಜನ ಕಂಡುಬಂದಾಗ ಹೇಗೆ ಪ್ರಾಸವನ್ನು ಕಾಪಾಡಿರುವರೆಂಬುದನ್ನೂ ಈ ಕೂಗುವ ಜನ ಗಮನಿಸಬಹುದು. 'ಯೆಂಡಕುಡಕ ರತ್ನ'ನಲ್ಲಿಯಾಗಲಿ ಪ್ರಾಸವಿಲ್ಲದಿಲ್ಲ. ಈಗಿನವರು ಕೈಲಿ ಕಿಸಿಯದೆ ಪ್ರಾಸವನ್ನು ಬಿಟ್ಟವರಲ್ಲ ಎಂಬುದನ್ನು ತೋರಿಸುವುದಕ್ಕಾಗಿ ರತ್ನ ತನ್ನ 'ಪುರುಷ ಸರಸ್ವತಿ'ಯಲ್ಲಿ, ಇಂಗ್ಲಿಷು-ಕನ್ನಡಗಳ 'ಮಣಿಪ್ರವಾಳ' ಶೈಲಿಯಲ್ಲಿ ಪ್ರಾಸಸಹಿತವಾದ ಪದ್ಯಗಳ ಹೊಡೆಮಳೆ ಹೊಡೆಸಿದ್ದಾನೆ. ನೋಡಿ:

ಫೇಸಿನಲಿ ಮುಮ್ಮೇಲು ತಾನಾ
ನೋಸು ನಿಲುವಂತೈಸಲೇ ಸ
ರ್ವೀಸು ನಮ್ಮಯ ಪೊಯೆಟನದು ಮಿಕ್ಕಿತರ ಕವಿಗಳಲಿ ॥
ಡಸ್ಟಿನಲಿ ಗೋಲ್ಡ್‌ಡಸ್ಟು ಮೌಂಟಿನ
ರೆಸ್ಟು ಗಿರಿಗಳ ಗಡಣದಲಿ ಫಾ
ರೆಸ್ಟು ಬೀಸ್ಟುಗಳೊಳಗೆ ಲಯನೆಂತಪ್ರತಿಮನಂತೆ।
ವೇಸ್ಟು ಬರಿಮಾತೇಕೆಯೀ ಫೋರ್
ಮೋಸ್ಟು ಪೊಯೆಟನು ನೆನೆಯೆ ತಾನೆ
ಕ್ಲಾಸ್ಟು ಕವಿಗಳ ಲಿಸ್ಟಿನೊಳಗೊಬ್ಬೊಂಟಿ ನರವಾಣಿ ॥
ಪಾಸ್ಟೊಳಿರಲಿಲ್ಲ ಪ್ರಸೆಂಟಿನ
ಪೋಸ್ಟುಡೇಟಿನ ಗರ್ಭದೊಳಗ
ಕ್ಯಾಸ್ಟುಮಾಡಲು ಪುರುಷಸರಸತಿಯನದರಿನ್ನಿಲ್ಲ ॥

ಹಿಂದಿನ ಸಂಸ್ಕೃತಭೂಯಿಷ್ಠವಾದ ಕನ್ನಡ ಪದ್ಯಗಳನ್ನು ಓದಿ ಅರ್ಥಮಾಡಿಕೊಳ್ಳಲು ಸಂಸ್ಕೃತಜ್ಞಾನ ಹೇಗೆ ಅಗತ್ಯವಾಗಿತ್ತೋ ಈ ಇಂಗ್ಲಿಷು ಭೂಯಿಷ್ಠವಾದ ಕನ್ನಡ

ಪದ್ಯಗಳನ್ನು ಓದಿ ಅರ್ಥಮಾಡಿಕೊಳ್ಳಲು ಇಂಗ್ಲಿಷುಜ್ಞಾನ ಹಾಗೇ ಅಗತ್ಯ. ಆದರೂ **ಪ್ರಾಸರಕ್ಷಣೆ** ಯಶಸ್ವಿಯಾಗಿದೆ. ಇನ್ನೇನು ಬೇಕು? 'ಕರ್ಣಾಟಕಾಂಬೆ ನೀ ಧನ್ಯೆ ಧನ್ಯೆ!' ಸಿರಿಗನ್ನಡಂ ಗೆಲ್ಗೆ! 'ಇದೇನಳವಗ್ಗಳವೋ' ಕಲಿಕಾಲ 'ಕವೀಂದ್ರರಾ'!

ಇನ್ನೊಂದು ಆಕ್ಷೇಪ: ಹೊಸ ಕವಿತೆಗಳಲ್ಲಿ ಅಲಂಕಾರವಿಲ್ಲ, ಎಂದು. 'ಪುರುಷ ಸರಸ್ವತಿ' ನೋಡಿ: ಆದ್ಯಕ್ಷರನ್ಯಾಸಾಲಂಕಾರ, ಅನ್ನೆಸೆಸರಿ ಅಪೆಂಡೇಜಲಂಕಾರ, ರಾಸಭಲಾಂಗೂಲಾಲಂಕಾರ, ರಜಕರಹಸ್ಯಾಲಂಕಾರ, ವ್ಯರ್ಥಾಲಂಕಾರ, ಸಂದೇಹ ಸಂದೋಹ ಸಂದೇಶಾಲಂಕಾರ, ಸತಿಪತಿ ಸಮಾನಸ್ಥಾನಾಲಂಕಾರ, ಅಮ್ಮಾಪ್ರ ಗಂಡಾಲಂಕಾರ . . . . ಸಾಕೆ? ಸ್ವಸ್ಥಪ್ರಾಸಾಲಂಕಾರ, ಪರಪಂಕ್ತಿಪ್ರಾರಂಭಾಲಂಕಾರ, ತ್ರಿತ್ರತ್ರಿತ್ರಿಪ್ರಾಸಾಲಂಕಾರ, ಊನಾಲಂಕಾರ, ಮೌನಮಾರ್ತಾಂಡಮಹಾಲಂಕಾರ . . . . ಸಾಕೆ? ಟವರ್ಗ ಪ್ರಥಮಾಕ್ಷರ ದ್ವಿತ್ವ ಪಂಚದಶಾಲಂಕಾರ, ತವರ್ಗ ತೃತೀಯಾಕ್ಷರ ದ್ವಿತ್ವ ದಶಕಾಲಂಕಾರ . . . . ಸಾಕೆ? ತಾಲೀಬುಲಾಕು ನ್ಯಾಯಾಲಂಕಾರ, ಏಕಜೀವ ದೇಹದ್ವಯ ನ್ಯಾಯಾಲಂಕಾರ, ಶೂದ್ರಶ್ರೋತ್ರಿಯ ನ್ಯಾಯಾಲಂಕಾರ . . . . ಸಾಕೆ? ಏನಿಲ್ಲ ಹೊಸಗನ್ನಡ ಕವಿತೆಗಳಲ್ಲಿ? ಹಳಬರಾಗಲಿ, ಹೊಸಬರಾಗಲಿ, 'ಕಬ್ಬಿಗರ್ ತಾಮುಘಟಿತಘಟನಾ ನೂತನಬ್ರಹ್ಮರಲ್ತೇ'!

ಇದೇ ರೀತಿಯಲ್ಲಿ ರತ್ನನು 'ಪುರುಷ ಸರಸ್ವತಿ'ಯ ಸೋಗಿನಲ್ಲಿ ರಚಿಸಿ ಪ್ರಕಟಿಸಿದ ಕೃತಿಗಳ 'ಪಂಕ್ತಿಪಂಕ್ತಿಯ ಹಿಂದೆ ನಡುನಡುವೆ ಕಾಯುತಿಹ ಕುಟುಕುಗಳ, ನಗುವಿನುಪಾಯದುರುಮೊಟಕುಗಳ, ಸೋರುವ ಗಾಯಕುಪ್ಪಿನ ಚಿಟಿಕೆ'ಗಳನ್ನು ಬಿಡಿಸಿ ಬಿಡಿಸಿ ತಿಳಿಸಲು ಹೊರಟರೆ, ಅದಕ್ಕೇ ಒಂದು ಇಡೀ ಪುಸ್ತಕ ಬೇಕಾದೀತು. ಆದರೆ ಕುಟುಕುಕೊಂಡವರಿಗೆ, ಮೊಟಕುಕೊಂಡವರಿಗೆ, ಚಿಟಿಕುಕೊಂಡವರಿಗೆ 'ಇದುನೋವು' ಎಂದು ಯಾರೂ ತಟ್ಟಿ ಹೇಳಬೇಕಾದುದಿಲ್ಲ, ಅವರಿಗೇ ಗೊತ್ತಾಗುತ್ತದೆ. ಬುದ್ಧಿವಂತರಾದರೆ ಎಚ್ಚರಗೊಂಡು ಮುಂದೆ ಅಂತಹ ಕುಟುಕು, ಮೊಟಕು, ಚಿಟುಕುಗಳಿಗೆ ಆಸ್ಪದವಾಗದಂತೆ ನೋಡಿಕೊಳ್ಳುತ್ತಾರೆ. ಗೋರ್ಕಲ್ಲಾದರೆ, 'ಮಳೆ ಗರೆದರಾ ಕಲ್ಲು ನೀರ್ಕುಡಿಯಲಹುದೆ' ಎಂದು ಕೇಳಬಹುದಾದರೂ, ಕಾಲಾನುಕಾಲಕ್ಕೆ ಕಲ್ಲು ಕೂಡ ಕುಳಿ ಬೀಳಬೇಕು. ಇದು ವಿಧಿನಿಯಮ.

("ಹತ್ತು ವರುಷ"ದಿಂದ ಸಂಗ್ರಹಿಸಿದ್ದು)

# ವಿಡಂಬನದ ವಿಷಯದಲ್ಲಿ ಮನಶ್ಶಾಸ್ತ್ರವು ಏನು ಹೇಳುತ್ತದೆ?

೧. ಒಂದು ಸಮಾಜದಲ್ಲಿ ಪ್ರತಿಯೊಬ್ಬರೂ ಏನು ಕೆಲಸ ಮಾಡಿದರೂ ಇತರರ ಮೇಲೆ ಪರಿಣಾಮವು ಏನಾಗುವುದೆಂಬುದನ್ನು ಯೋಚಿಸಬೇಕು. ಸಮಾಜವು ವ್ಯಕ್ತಿಗಳ ನೆಮ್ಮದಿಗೋಸ್ಕರವಾಗಿಯೇ ಏರ್ಪಟ್ಟಿರುವ ವ್ಯವಸ್ಥೆ. ಸಮಾಜದಿಂದ ತಾವು ಹೊಂದಬಹುದಾದ ಅನುಕೂಲಗಳಿಗೆ ಪ್ರತಿಯಾಗಿ, ಸಾಮಾಜಿಕರು ಕೆಲವು ಜವಾಬುದಾರಿ (ಹೊಣೆ) ಗಳನ್ನು ಹೊರಬೇಕು. ತನ್ನ ವರ್ತನೆಯಿಂದ ಸಮಾಜದ ಮೇಲೆ ಎಂತಹ ಪರಿಣಾಮವು ಉಂಟಾಗುವುದೆಂಬುದನ್ನು, ಪ್ರತಿಯೊಬ್ಬ ಸಾಮಾಜಿಕನೂ ಯೋಚಿಸಬೇಕು. ಇದು ಅತಿ ಮುಖ್ಯವಾದ ಜವಾಬ್ದಾರಿ. ಜವಾಬ್ದಾರಿಗಳಲ್ಲಿ ಯಾವುದೊಂದನ್ನಾದರೂ ಸಾಮಾಜಿಕನು ನಿರ್ವಹಿಸದಿದ್ದರೆ ಆಗ ಸಮಾಜಕ್ಕೆ ಆತನನ್ನು ದಂಡಿಸುವ ಹಕ್ಕಿದೆ. ಅಂದರೆ, ಸಾಮಾಜಿಕನ ವರ್ತನವು, ಸಮಾಜವೇ ಏರ್ಪಡಿಸಿರುವ ಒಂದು ನಿಯಮಕ್ಕೆ ಅನುಸಾರವಾಗಿರದಿದ್ದಲ್ಲಿ ಆ ವರ್ತನವನ್ನು ಸಮಾಜವು ಖಂಡಿಸುವುದು.

ಅಂತಹ ಸಂದರ್ಭಗಳಲ್ಲಿ ಸಮಾಜದ ಪರವಾಗಿ ಯಾವನಾದರೊಬ್ಬ ವ್ಯಕ್ತಿಯೇ ಸಮಾಜದ ಒಟ್ಟು ಅಭಿಪ್ರಾಯವನ್ನು ತಿಳಿಸಬಹುದು. ಅಥವಾ, ಸಮಾಜದಲ್ಲಿರುವ ಉಳಿದೆಲ್ಲರಿಗೂ ಈ ಖಂಡನೆಯ ಅಂಶ ತಿಳಿಯಲೆಂದೂ ಯಾವನಾದರೊಬ್ಬ ವ್ಯಕ್ತಿಯು ಹೀಗೆ ಖಂಡಿಸಲು ಉಪಕ್ರಮಿಸಬಹುದು. ಈ ರೀತಿಯ ಖಂಡನೆಗಳನ್ನು ನಾವು ಮಾನವನ ಎಲ್ಲ ವರ್ತನೆಗಳಲ್ಲಿಯೂ ವ್ಯಾಪಾರಗಳಲ್ಲಿಯೂ ಕಾಣಬಹುದು. ಉದಾಹರಣೆಗಾಗಿ, ಸಾಹಿತ್ಯಪ್ರಪಂಚದಲ್ಲಿ ನೋಡೋಣ. ಯಾವನಾದರೊಬ್ಬನು—ಬರಹಗಾರನೋ ಬೇರೆಯವನೋ—ತನ್ನ ವ್ಯವಹಾರದಲ್ಲಿ ಖಂಡನೀಯವಾದ ಒಂದು ಮಾರ್ಗವನ್ನು ಹಿಡಿದಿದ್ದರೆ—ಅದನ್ನು ಕಂಡ ಬೇರೊಬ್ಬ ಬರಹಗಾರನು ತನ್ನ ಬರಹಗಳಲ್ಲಿ ಆ ಖಂಡನೆಯನ್ನು ಹೊರಗೆ ಹಾಕಬಹುದು. ಹೀಗೆ ಸಾಹಿತ್ಯಮುಖೇನ ಹೊರಬೀಳುವ ಖಂಡನೆಗಳನ್ನು ವಿಡಂಬನವೆಂದು ಕರೆದಿರುವರು.

೨. ಶತ್ರುವನ್ನು ಎದುರಿಸಿ, ಅದರೊಡನೆ ಹೋರಾಡಿ, ತಾವು ವಿಜಯಿಯಾಗಬೇಕಾಗಿರುವುದರಿಂದ ಪ್ರಾಣಿಗಳು ಒಂದು ಉಪಾಯವನ್ನು ಕಂಡುಹಿಡಿದುಕೊಂಡಿವೆ. ಅಂತಹ ಸಂದರ್ಭಗಳಲ್ಲಿ ತಮಗೆ ಉಂಟಾಗುವ ಭಾವದ ಬಿಸಿಗೆ ಅನುಸಾರವಾಗಿ, ತಮ್ಮ ದೇಹದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿಕೊಳ್ಳುತ್ತವೆ. ಚಿಕ್ಕಿಗೆ ಸಿಟ್ಟು ಬಂದಾಗ ಅದರ ದೇಹದ ಗಾತ್ರ ಮೊದಲಿಗಿಂತ ಎರಡರಷ್ಟಾಗಿರುವಂತೆ

ಕಾಣುವುದಿಲ್ಲವೇ? ಅದು ಹೀಗೆ ಮಾಡಿಕೊಂಡುದರಿಂದ ಶತ್ರುವಿಗೆ ಭಯವುಂಟಾಗಿ ಸೋಲು ಉಂಟಾಗುವುದು. ಮನುಷ್ಯವರ್ಗದಲ್ಲಿಯೂ ಇಂತಹ ಸಂದರ್ಭಗಳು ಬೇಕಾದಷ್ಟಿವೆಯಷ್ಟೆ. ಆ ಸಮಯಗಳಲ್ಲಿ ಮನುಷ್ಯನು ಹೇಗೆ ವರ್ತಿಸುವನೆಂಬುದನ್ನು ತಿಳಿಯಬೇಕಾದರೆ ಅನಾಗರಿಕ ಮಾನವನ ವರ್ತನೆಯನ್ನು ನೋಡಬೇಕು. ಕೆಲವು ಅನಾಗರಿಕ ಜನಾಂಗಗಳಲ್ಲಿ ಈಗಲೂ ಕೂಡ—ಈ ಸಂದರ್ಭಗಳಲ್ಲಿ ಮುಖ ಮೈಗೆಲ್ಲಾ ಪಟ್ಟೆಪಟ್ಟೆಯಾಗಿ ಬಣ್ಣ ಬಳಿದುಕೊಳ್ಳುತ್ತಾರೆ. ಬರಿ ಬಣ್ಣದಿಂದಲೇ ಶತ್ರುವಿಗೆ ಹೆದರಿಕೆಯುಂಟಾಗಲಾರದೆಂಬ ಶಂಕೆಯಿಂದ ವಿಕಾರವಾಗಿ ಕೂಗುತ್ತಾ ಹಾರಾಡುವುದುಂಟು. (ಈ ಕೂಗಿಗೆ 'ಸಿಂಹನಾದಂ ಗೈದನ್' ಎಂದು ಹೇಳುವುದುಂಟು.) ಹಾರಾಡುವಾಗ ದೇಹವೆಲ್ಲ ಹೆಚ್ಚು ಪ್ರದೇಶವನ್ನು ಆವರಿಸಿಕೊಂಡಿರುವಂತೆ ಕಾಣುವುದರಿಂದ ಶತ್ರುವಿಗೆ ಭಯವಾಗಬಹುದು. ಹೀಗೆ ಭಯವಾಗಿ ಶತ್ರುವು ಆಯುಧವನ್ನು ಬಿಸಾಡಿಬಿಟ್ಟು ಓಡಿಹೋಗುವನು. ಅಂದರೆ ಈ ವರ್ತನೆಗಳೆಲ್ಲಾ ತನ್ನ ಪ್ರತಿಷ್ಠೆಯು ಏರುವುದಕ್ಕೂ ಶತ್ರುವಿನ ದುರ್ಬಲತೆ ಹೆಚ್ಚಾಗುವುದಕ್ಕೂ ಸಹಾಯವಾಗುವುವು.

ಆದರೆ, ಶತ್ರುವೂ ಕೂಡ ಇದೇ ಉಪಾಯಗಳನ್ನು ಉಪಯೋಗಿಸಿಕೊಳ್ಳಬಹುದಲ್ಲ? ಆದುದರಿಂದ, ಶತ್ರುವನ್ನು ಮಾತ್ರ ನಿರಾಯುಧನನ್ನಾಗಿ ಮಾಡುವ ಉಪಾಯ ಬೇಕಾಯಿತು. ಅದಕ್ಕಾಗಿ ಮಾನವನು ಅನೇಕಾನೇಕ ಪ್ರಯತ್ನಗಳನ್ನು ಮಾಡಿದನು. ಇದೆಲ್ಲದರ ಪರಿಣಾಮವೇ ಹಾಸ್ಯ. ಹಾಸ್ಯದಲ್ಲಿ ಎದುರಾಳಿಯನ್ನು ಖಂಡಿಸಬಹುದು. ಸುಧಾರಿಸಿದ ಸಮಾಜದ ನಿಯಮಕ್ಕನುಸಾರವಾಗಿ ಎದುರಾಳಿ ಸಾಧಾರಣವಾಗಿ ಪ್ರತಿಕ್ರಿಯೆಯನ್ನು ನಡೆಸಲಾರ. ಹಾಸ್ಯಮಾಡುವುದರಿಂದ ನಮ್ಮ ಪ್ರತಿಷ್ಠೆ ಏರುವುದು, ಎದುರಾಳಿಯ ತಲೆ ಬಾಗುವುದು. ಇವೆರಡರಿಂದ ನಮಗೆ ಅತಿಶಯ ಸುಖ ಉಂಟಾಗುವುದು.

೩. ಮಾನವನು ಎಂದು ಹಾಸ್ಯವನ್ನು ಉಪಯೋಗಿಸಲು ಸಮರ್ಥನಾದನೋ ಅಂದಿನಿಂದ ಅವನ ಕೈಲಿ ಅತಿ ಉಪಯುಕ್ತವಾದ ಆಯುಧವೊಂದು ಬಂದಂತಾಯಿತು. ಹಾಸ್ಯದಲ್ಲಿ ಸೇರಿರುವ ಅಂಶಗಳನ್ನು ನೋಡೋಣ. ನಗು ಬಂದ ಸಂದರ್ಭಗಳಲ್ಲೆಲ್ಲಾ ನಮಗೆ ಸಂಕಟವುಂಟಾಗಿಯೇ ಇರಬೇಕೆಂದು ಮನಶ್ಶಾಸ್ತ್ರಿಗಳು ಹೇಳುತ್ತಾರೆ. ನಾವು ಯಾವಾಗಲಾದರೂ ನಗುವುದಾದರೆ, ಅದು, ಸಂಕಟಪಡಬಾರದೆಂಬ ಅಭಿಲಾಷೆಯಿಂದ. ಉದಾಹರಣೆಗಾಗಿ, ನಾವು ನೋಡುತ್ತಿದ್ದ ಹಾಗೆ ಭರಭರನೆ ಶಿಸ್ತುಗಾರ ಪುಟ್ಟಸಾಮಿಯೊಬ್ಬ ರಸ್ತೆಯಲ್ಲಿ ನಡೆದು ಹೋಗುತ್ತಿದ್ದಾನೆಂದು ಇಟ್ಟುಕೊಳ್ಳೋಣ. ತಟಕ್ಕನೆ ಅವನು ಅಲ್ಲಿ ಬಿದ್ದಿರುವ ಬಾಳೆಯ ಹಣ್ಣಿನ ಸಿಪ್ಪೆಯ ಮೇಲೆ ಕಾಲಿಟ್ಟು, ಜಾರಿ ಬಿದ್ದನೆಂದರೆ, ನೋಡುತ್ತ ನಿಂತಿದ್ದ ನಾವೆಲ್ಲ ಗೊಳ್ಳೆಂದು ನಗುವೆವು. ಇದಕ್ಕೆ ಕಾರಣವಿಷ್ಟೆ. ಹಾಗೆ ನಡೆ

ಯುತ್ತ ಬಂದವನು ಮುಂದೆಯೂ ಹಾಗೆಯೇ ನಡೆಯುವನೆಂದು ನಾವು ಬಯಸಿದ್ದೆವು. ಅವನು ನೆಲಕ್ಕೆ ಬೀಳುವುದರಿಂದ ನಮ್ಮ ಬಯಕೆಯಂತೆ ಕೆಲಸವಾಗಲಿಲ್ಲ. ಯಾವಾಗ ನಾವು ಬಯಸಿದಂತೆ ಆಗಲಿಲ್ಲವೋ ಆಗ ನಮಗೆ ಸ್ವಲ್ಪ ಸಂಕಟ, ಸ್ವಲ್ಪ ನೋವು ಉಂಟಾಗುತ್ತದೆ. ಎರಡನೆಯದಾಗಿ, ಅವನು ಬಿದ್ದ ಒಡನೆಯೇ ಅವನ ಪ್ರತಿಷ್ಠೆಗೆ ಕುಂದಕವುಂಟಾಗಿ ಅವನಿಗೆ ನೋವು ಉಂಟಾಗಿಯೇ ಇರುತ್ತದೆ. ಈ ನೋವನ್ನು—ಈ ಸಂಕಟವನ್ನು-ನಾವು ಕೂಡ ಒಂದು ಮಾದರಿಯ ಅನುಕರಣೆಯಿಂದ ಅನುಭವಿಸುತ್ತೇವೆ. ಹೀಗೆ, ನಾವು ಸನ್ನಿವೇಶದಲ್ಲಿ ಮನಗಾಣಬಹುದಾದ ಭಾವಗಳನ್ನು ಅನುಕರಿಸುವುದು ಒಂದು ಹುಟ್ಟು ಗುಣ. ಈ ಸಂದರ್ಭದಲ್ಲಿ, ಜಾರಿ ಬಿದ್ದವನು ಅನುಭವಿಸಿದ ಸಂಕಟವನ್ನು ಅನುಕರಣಮಾಡಿ ನಾವೂ ಅನುಭವಿಸುತ್ತೇವೆ. ಆದರೆ ನಮಗೆ ಸಂಕಟವು ಅಷ್ಟು ತೀಕ್ಷ್ಣವಾಗಿರುವುದಿಲ್ಲ. ಏಕೆಂದರೆ, ಅದು ಅನುಕರಣಪೂರ್ವಕವಾಗಿ ಉಂಟಾದ ಸಂಕಟ. ಆದುದರಿಂದ ಇಂತಹ ಸಂದರ್ಭಗಳಲ್ಲಿ ಎರಡು ಕಾರಣಗಳಿರುತ್ತವೆ:— ಒಂದು, ನಾವು ಬಯಸಿದಂತೆ ಕೆಲಸವು ಆಗದಿದ್ದುದು; ಇನ್ನೊಂದು, ನಾವು ಅನುಭವಿಸಿದ ಸಂಕಟ. ಈ ಎರಡು ಕಾರಣಗಳಿಂದಲೂ ನಮಗೆ ನೋವು ಉಂಟಾಗುವುದು. ಈ ನೋವಿನ ಕಾವು ಬಹಳ ಕಡಿಮೆ. ಇದರಿಂದ ನಮ್ಮ ಜೀವನಕ್ಕೆ ಭಂಗಬರುವುದಿಲ್ಲ. ಆದರೂ ಇದು ನೋವು. ಈ ನೋವಿನ ನಿವಾರಣೆಗಾಗಿ, ಅಥವಾ ಈ ನೋವಿನಿಂದುಂಟಾದ ದೈಹಿಕ ಮಾನಸಿಕ ವ್ಯತ್ಯಾಸಗಳ ನಿವಾರಣೆಗಾಗಿ, ನಾವು ಒಂದು ಉಪಾಯ ಮಾಡುತ್ತೇವೆ. ನೋವಾದಾಗ ಶ್ವಾಸಕೋಶವು ಸಂಕುಚಿಸುತ್ತದೆ, ರಕ್ತದಲ್ಲಿ ವಿಷವು ಹೆಚ್ಚಾಗುತ್ತದೆ. ಅವುಗಳನ್ನು ನಿವಾರಣೆಮಾಡಿಕೊಳ್ಳುವುದಕ್ಕೋಸ್ಕರ ನಾವು ನಗುತ್ತೇವೆ. ಹಾಗೆ ನಕ್ಕಾಗ ಶ್ವಾಸಕೋಶವು ಅಗಲವಾಗುತ್ತದೆ, ಹೆಚ್ಚು ನಿರ್ಮಲವಾದ ಗಾಳಿ ಒಳಕ್ಕೆ ಬರುತ್ತದೆ. ರಕ್ತ ಶುದ್ಧಿಯಾಗುತ್ತದೆ. ಈ ಎಲ್ಲ ಕಾರಣಗಳಿಂದ ನಮಗೆ ಉತ್ಸಾಹವುಂಟಾಗುತ್ತದೆ.

ಆದುದರಿಂದ ಹಾಸ್ಯದ ಸಂದರ್ಭದಲ್ಲೆಲ್ಲಾ ಸಂಕಟವಿರುತ್ತದೆ. ವಿಡಂಬನದಲ್ಲಿ ಯಾರನ್ನು ಕುರಿತು ಹಾಸ್ಯಮಾಡುವೆವೋ ಅವರಿಗೆ ನಿಜವಾಗಿ ಸಂಕಟವಾಗಬಹುದು. ಏಕೆಂದರೆ, ವಿಡಂಬನದಲ್ಲಿ ನಿಜವಾಗಿಯೂ ಸಂಕಟವನ್ನುಂಟುಮಾಡಬೇಕೆಂಬ ಅಭಿಪ್ರಾಯವಿರುತ್ತದೆ. ಆದುದರಿಂದ, ಯಾರನ್ನು ಕುರಿತು ಹಾಸ್ಯ ಮಾಡುವೆವೋ ಅವರ ಪ್ರತಿಷ್ಠೆಗೆ ಕುಂದಕ ಬಂದು, ಅವರಿಗೆ ಸಂಕಟವಾಗುತ್ತದೆ. ಅಂತಹ ಸಂದರ್ಭದಲ್ಲಿ ಅವರ ಸಂಕಟವನ್ನು ಮನಗಂಡ ನಮಗೆ ಹಾಸ್ಯವುಂಟಾಗುತ್ತದೆ. ಅವರೂ ಕೂಡ, ಈ ವ್ಯವಹಾರದಲ್ಲಿ ಹಾಸ್ಯವನ್ನೇ ಕಂಡು ನಕ್ಕುಬಿಟ್ಟರೆ ವಿಡಂಬನದಿಂದ ಆಗಬೇಕಾದ ಕೆಲಸವಾಗಲಿಲ್ಲ. ಅವರಿಗೆ ನಿಜವಾಗಿಯೂ ಸಂಕಟದಲ್ಲಿಯೂ ನಗುವನ್ನು ಹುಡುಕುವ ಒಂದು ಮಾದರಿಯ ವಿನೋದ ಮನೋಭಾವ

(Sense of humour)ವಿದೆ ಎನ್ನಬಹುದು. ಅವರು ಇನ್ನೊಬ್ಬರನ್ನು ನೋಡಿ ಹಾಸ್ಯಮಾಡಿ ವಿನೋದಪಡುವಂತೆ, ತಮ್ಮನ್ನು ಹಾಸ್ಯಮಾಡಿಕೊಂಡು ವಿನೋದ ಪಡುವ ಶಕ್ತಿಯುಳ್ಳವರು. ಇವರಿಗೆ ಸಂಕಟವುಂಟಾಗುವಂತೆ ಮಾಡುವುದಕ್ಕೆ ವಿಡಂಬನ ಸಾಲದು—ಅವರಿಗೇ ಬೇರೆ ಆಯುಧವನ್ನು ಮಸೆಯಬೇಕು.

ನಾವು ಈ ರೀತಿ ಹಾಸ್ಯಮಾಡುವುದರಲ್ಲಿ ಇನ್ನೊಂದು ಸ್ವಾರಸ್ಯವಿದೆ. ನಾವು ಯಾರನ್ನಾದರೂ ಕುರಿತು ಹಾಸ್ಯಮಾಡಿ, ಅವರಿಗೆ ಸಂಕಟವುಂಟಾಗುವಂತೆ ಮಾಡಬಹುದು. ಆದರೆ, ಪ್ರತಿಯಾಗಿ, ಅವರು ಏನನ್ನೂ ಮಾಡಲಾರರು. ಅವರ ಕೋಪತಾಪವನ್ನು ತೋರಿಸಲು ಯಾವ ಅವಕಾಶವೂ ಉಪಾಯವೂ ಅವರಿಗಿಲ್ಲ. ಅವರನ್ನು ನಿರಾಯುಧರನ್ನಾಗಿ ಮಾಡಿ ನಾವು ಮಾತ್ರ ಅವರಿಗೆ ಸಂಕಟವಾಗುವಂತೆ ಮಾಡಿರುತ್ತೇವೆ! ಇದೊಂದು ಮಾದರಿಯ ದ್ವಿಗುಣವಿಜಯ. ಇದೇ ಹಾಸ್ಯದ ಸ್ವಾರಸ್ಯ. ಪ್ರತಿಕಕ್ಷಿಯಿಂದ ನಮಗೇನೂ ಆಗುವುದಿಲ್ಲವೆಂಬ ಭರವಸೆ ಇಲ್ಲಿದೆ; ಆದರೆ ಅವನಿಗೆ ಸಂಕಟವಾಗಿದೆಯೆಂಬ ತೃಪ್ತಿಯೂ ಇದೆ.

೪. ವಿಡಂಬನದಲ್ಲಿಯೂ ಹಾಗೆಯೇ. ಈ ವಿಡಂಬನದ ಸಹಾಯದಿಂದ ನಾವು ಪ್ರತಿಕಕ್ಷಿಯ ವಿಷಯದಲ್ಲಿ ಕುಚೇಷ್ಟೆ ಮಾಡಿ, ನೋಡಿದವರೆಲ್ಲರೂ ನಗುವಂತೆ ಮಾಡಿ, ಅವನನ್ನು ನಿರಾಯುಧನನ್ನಾಗಿ ಮಾಡಿ, ನಮ್ಮ ರಚ್ಚನ್ನು ಸಂಪೂರ್ಣವಾಗಿ ತೀರಿಸಿಕೊಳ್ಳುತ್ತೇವೆ. ನಮ್ಮ ವಿಜಯ ತೃಪ್ತಿಕರವಾಗಿದೆ; ಅವನ ಸೋಲು ಸಂಪೂರ್ಣವಾಗಿದೆ. ವಿಡಂಬನದಲ್ಲಿ ಕಾಲದೇಶಾತ್ಮಕವಲ್ಲದ ಒಂದು ವಿಶ್ವಗುಣವಿದೆ. ಏಕೆಂದರೆ ಅದರ ಮರ್ಮವೆಲ್ಲವೂ ಮಾನವ ವರ್ಗಕ್ಕೆಲ್ಲ ಸಾಧಾರಣವಾದ ಕೆಲವು ಮನೋವೃತ್ತಿಗಳನ್ನು ಅನುಸರಿಸಿವೆ. ಆ ಮನೋವೃತ್ತಿಗಳ ಅಸ್ತಿಭಾರದ ಮೇಲೆ ವಿಡಂಬನವನ್ನು ಕಟ್ಟಿರುವುದರಿಂದ, ಕಟ್ಟಡದ ಸೌಂದರ್ಯವೂ ಇಲ್ಲಿ ನೋಡತಕ್ಕ ಒಂದು ಅಂಶ. ನಾವು ವಿಡಂಬನವನ್ನು ಸಾಹಿತ್ಯದ ಅಂಗವಾಗಿ ಮಾಡಿ ಅದರಲ್ಲಿ ಸೌಂದರ್ಯವನ್ನು ಕಾಣುತ್ತೇವೆಂದು ಹೇಳಿದಾಗಲೆಲ್ಲ, ಈ ಕಟ್ಟಡವನ್ನೇ ಉದ್ದೇಶಿಸಿ ಹೇಳುವುದು. ಈ ಕಟ್ಟಡವಿಲ್ಲದಿದ್ದಲ್ಲಿ ವಿಡಂಬನದಲ್ಲಿರುವ ಹಾಸ್ಯವನ್ನು ರಸವನ್ನಾಗಿ ಮಾಡಿಕೊಳ್ಳುವುದಕ್ಕೆ ಕಷ್ಟವಾಗುತ್ತಿತ್ತು. ಗರ್ಭದೊಳಗಿರುವ ಕಟುತರವಾದ ಔಷಧದ ಸೇವನೆಗಾಗಿ, ಸಕ್ಕರೆಯ ಆವರಣವಿರುವ ಮಾತ್ರೆಯ ಹಾಗೆ!

ವಿಡಂಬನವು ತೀರ ಲೌಕಿಕ, ಇದು ತೀರ ಸಮಕಾಲಿಕ, ಎಂದು ಹೇಳುವುದುಂಟು. ಈ ಕಾಲ, ಈ ಜನ, ಈ ಸಮಾಜ,—ಇವು ಅಳಿದು ಹೋದಮೇಲೆ ವಿಡಂಬನವೂ ಇರುವುದಿಲ್ಲವೆಂದು ಹೇಳುವುದುಂಟು. ಆದರೆ ವಿಡಂಬನದ ಚೌಕಟ್ಟು ಸೌಂದರ್ಯಮರ್ಮವನ್ನು ಹೊಂದಿದ್ದರೆ, ಆಗ ಈ ವಿಡಂಬನವು ಸಮ

ಕಾಲಿಕ ಮಾತ್ರವಾಗಿದ್ದು ನಾಶವಾಗುವುದಿಲ್ಲ. ಒಳಗಿನ ಔಷಧಿಯ ಅವಶ್ಯಕತೆ ಯಿಲ್ಲದಿದ್ದರೂ ಹೊರಗಿರುವ ಸಕ್ಕರೆಯ ಸಿಹಿ ಯಾವಾಗಲೂ ಮಧುರವಾಗಿರು ತ್ತದೆ. ಕಟ್ಟಡ, ಚೌಕಟ್ಟಿನ ಸೌಂದರ್ಯ, ಒಂದು ವಿಶ್ವಗುಣ. ಆದುದರಿಂದ ವಿಡಂಬನವು ಸಮಕಾಲಿಕವಾಗಿ ಹೆಚ್ಚು ಕಾವನ್ನು ಕಾರುವುದಾದರೂ ಸಾಹಿತ್ಯದಲ್ಲಿ ಸ್ಥಾನವನ್ನು ಹೊಂದಿ ಯಾವಾಗಲೂ ಬದುಕಿ ಬೆಳಗುವ ಸ್ವಭಾವವನ್ನು ಹೊಂದಿರುತ್ತದೆ.

೫. ವಿಡಂಬನಕ್ಕೆ ಅಧಿಕಾರಿ ಯಾರು? ಎಲ್ಲರ ಕೈಯಲ್ಲೂ ಈ ಆಯು ಧವು ಇರಬಹುದಾದರೂ, ಎಲ್ಲರೂ ಇದನ್ನು ಉಪಯೋಗಿಸುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಋಜುಮಾರ್ಗದಲ್ಲಿ ನಡೆದು ಯಾವನು ಹೆಚ್ಚು ಪ್ರತಿಷ್ಠೆ ಗೌರವವನ್ನು ಸಂಪಾದಿಸಿರುವನೋ ಅವನ ಕೈಯಲ್ಲಿ ಇದು ಯೋಗ್ಯವಾದ ಆಯುಧ. ತಾನು ಇನ್ನೊಬ್ಬರನ್ನು ಕಂಡು ಹಾಸ್ಯಮಾಡಲು ಹೇಗೆ ಇವನು ಸಮರ್ಥನೋ ಹಾಗೆಯೇ ತನ್ನನ್ನೂ ಹಾಸ್ಯಮಾಡಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರಬೇಕು. ಎಲ್ಲಕ್ಕೂ ಮುಖ್ಯವಾಗಿ, ವಿಡಂಬನದ ಮುಳ್ಳು ಪ್ರತಿಕಕ್ಷಿ ಯನ್ನು ಮಾತ್ರ ನೋಯಿಸಬೇಕಾಗಿರುವುದರಿಂದ, ಉಳಿದವರೆಲ್ಲರಿಗೂ ಅದರಲ್ಲಿ ಮುಳ್ಳಿರದಂತಾಗಿ, ಕಟ್ಟಡದ ಸೌಂದರ್ಯವು ಹೊರಹೊಮ್ಮುತ್ತಿರಬೇಕು. ಆಗ ವಿಡಂಬನಕ್ಕೆ ಒಂದು ವಿಶ್ವಗುಣವೇ ಬಂದಂತಾಗುತ್ತದೆ. ಆದುದರಿಂದ ವಿಡಂಬನ ಕಾರಿ ಕವಿಯಾಗಿರಬೇಕು–ಕಲ್ಪನಾಸಾಮರ್ಥ್ಯವನ್ನು ಹೊಂದಿರುವ ಕವಿಬ್ರಹ್ಮ. ಆಗಮಾತ್ರ, ಇವನು ವಿಡಂಬನಕ್ಕೆ ಮುಖ್ಯವಾಗಿರುವ ಸಕ್ಕರೆಯ ಹೊದಿಕೆಯನ್ನು ನೇಯಬಲ್ಲ.

ಇಷ್ಟೇ ಅಲ್ಲ; ಕೆಲವು ಸಮಯಗಳಲ್ಲಿ ವಿಡಂಬನೆಯೇ ಶಿಕ್ಷೆ ಮಾಡುವುದಕ್ಕೆ ಯೋಗ್ಯವಾದ ಆಯುಧವಾಗಿರುತ್ತದೆ. ಬೇರೆ ಯಾವ ಮಾರ್ಗವೂ ಸರಿಹೋಗು ವುದಿಲ್ಲ. ಯಾರಾದರೊಬ್ಬರ ನಡತೆಯನ್ನು ನಾವು ಖಂಡಿಸಬೇಕಾದರೆ ಅವರ ವಿಷಯದಲ್ಲಿ ನಮಗೆ ಕೋಪ ಉಂಟಾಗಿರಬೇಕು; ಒಂದು ಮಾದರಿಯ ಸತ್ಯಾ ಗ್ರಹ. ಈ ಆಗ್ರಹದೊಡನೆ ಮಿಳಿತವಾಗಿ ಇನ್ನೊಂದು ಮನೋಭಾವವೂ ಇರು ತ್ತದೆ. ಯಾವನನ್ನು ನಾವು ಖಂಡಿಸಬೇಕೆಂದು ಇರುವೆವೋ ಅವನ ವಿಷಯದಲ್ಲಿ ದಯೆ—ಒಂದು ಮಾದರಿ ವಾತ್ಸಲ್ಯ. ವಾತ್ಸಲ್ಯವು ಉಂಟಾಗಬೇಕಾದರೆ ನಾವು ದೊಡ್ಡವರಾಗಿಯೂ—ಯಾವ ವಿಷಯದಲ್ಲಿ ವಾತ್ಸಲ್ಯವು ಉಂಟಾಗಬೇಕೋ ಅದು ಸೂಕ್ಷ್ಮ—ಚಿಕ್ಕದಾಗಿಯೂ ಇರಬೇಕು. ನಾವು ಯಾವುದೋ ಕಾರಣ ದಿಂದ ಅಧಿಕಾರಸಂಪನ್ನರು—ಯೋಗ್ಯರು ಎಂಬ ಪ್ರತಿಷ್ಠೆ ಇರಬೇಕು. ಯಾವ ವಿಷಯದಲ್ಲಿ–ಯಾರಲ್ಲಿ–ನಾವು ವಾತ್ಸಲ್ಯವನ್ನು ತೋರಿಸಬೇಕೋ, ಆ ವಿಷಯ–ಅವರು ಚಿಕ್ಕವರು–ಅಲ್ಪರಾಗಿರಬೇಕು. ಅಂತಹ ಸಂದರ್ಭಗಳಲ್ಲಿ ವಾತ್ಸಲ್ಯವು ತಲೆ

ದೋರುವುದು. ನಾವು ಅವರನ್ನು ಕಾಪಾಡುವ ಶಕ್ತಿಯುಳ್ಳವರಾಗಿರಬೇಕು. ನಮಗೂ ಅವರಿಗೂ ಒಂದು ತೆರನಾದ 'ಪಿತಾ-ವತ್ಸ' ಸಂಬಂಧವು ಬರಬೇಕು. ಆಗ ವಾತ್ಸಲ್ಯವು ಹೊರಸೂಸುವುದು.

ಆದುದರಿಂದ ವಿಡಂಬನದ ತಳಹದಿಯಾಗಿ ವಾತ್ಸಲ್ಯ, ಆಗ್ರಹ ಮತ್ತು ಸಂಕಟ ಇವು ಮೂರು ಇರುತ್ತದೆ. ಈ ಮಿಳಿತಭಾವವು ಹೇಗೆ ಕೆಲಸಮಾಡುತ್ತದೆಂಬುದನ್ನು ನೋಡೋಣ. ಹಾಸ್ಯವನ್ನು ಉತ್ಪನ್ನಮಾಡಬೇಕಾಗಿರುವುದರಿಂದ ಪರೋಕ್ಷವಾದ ಸಂಕಟವು ಪ್ರೇಕ್ಷಕರಿಗೆ ಆಗಬೇಕು. ಅದಕ್ಕೋಸ್ಕರವಾಗಿಯೇ, ವಿನೋದ ಚಿತ್ರ (Caricature) ಗಳಲ್ಲಿರುವಂತೆ ಕೆಲವು ಅಂಶಗಳ ಉತ್ಪ್ರೇಕ್ಷೆಯಿರಬಹುದು. ಆಗ 'ಆರ್. ರಾಘವೇಂದ್ರರಾಯ' ಎಂಬುದನ್ನು 'ದ್ವಿರೇಫ ರಾಯ'ರು ಎಂತಾಗಲಿ, 'ತ್ರಿರೇಫೀ' ಎಂತಾಗಲೀ ಸಂಬೋಧಿಸಬಹುದು. ಉಪಯೋಗಿಸುವ ಪದಗಳಲ್ಲಿ ಈ ವಿಧವಾದ ಧ್ವನಿ ಬರುವಂತಿರಬಹುದು:— 'ನೀವೇನು ಕುಂಭಕೋಣದ ಕಡೆಯವರೇ?' ಎಂದು ಹೇಳುವ ಹಾಗೆ. ವಿಷಯಗಳಲ್ಲಿನ ಪ್ರೌಢಿಮೆಗೆ ಬದಲಾಗಿ ಅವುಗಳಲ್ಲಿರಬಹುದಾದ ಅಲ್ಪತೆಯನ್ನು ಪ್ರಾಮುಖ್ಯವಿಷಯವೆನ್ನುವ ಹಾಗೆ ಹೇಳುವುದು—ಇವೇ ಮುಂತಾದ ಮಾರ್ಗಗಳನ್ನು ವಿಡಂಬನದಲ್ಲಿ ಉಪಯೋಗಿಸುವುದುಂಟು.

ಆದುದರಿಂದ ವಿಡಂಬನಕ್ಕೆ ತಳಹದಿಯಾಗಿ ಕೆಲವು ಮನೋಭಾವಗಳಿರುತ್ತವೆ. ಆತ್ಮಪ್ರತಿಷ್ಠೆಯೊಂದು. ಎರಡನೆಯದಾಗಿ, ಒಂದು ವಿಧವಾದ ವಾತ್ಸಲ್ಯ. ಇದರಲ್ಲಿ ದಯೆ ಕೋಪ ಎರಡೂ ಉಂಟು. ಮೂರನೆಯದಾಗಿ ಆಗ್ರಹ. ಇವುಗಳೆಲ್ಲವನ್ನೂ ಸುಂದರವಾದ ಚೌಕಟ್ಟಿನಲ್ಲಿಟ್ಟು ಎದುರಾಳಿಯ ಮುಂದೆ ಇಡುತ್ತೇವೆ. ವಿಡಂಬನದಿಂದ ಸಂಕಟವಾಗಿ—ಅದರ ಫಲವಾಗಿ ಹಾಸ್ಯವು ಹುಟ್ಟಿ ಎದುರಾಳಿಯು ನಿರಾಯುಧನಾಗುವನು. ನಾವು ಅವನನ್ನು ಹೊಡೆದರೂ ಅವನು ಹಿಂತಿರುಗಿ ಹೊಡೆಯಲಾರ ಎಂಬ ಪರಿಸ್ಥಿತಿ. ನಗುವಿನ ಮರ್ಮವೇ ಇದು. ನಾಗರಿಕ ಮಾನವನು ಈ ಮರ್ಮವನ್ನು ತಿಳಿದು ವಿಡಂಬನವನ್ನು ಉಪಯೋಗಿಸುವನು. ಅದರಲ್ಲಿರುವ ಕಟ್ಟಡದ ಸೊಬಗು ಅದಕ್ಕೊಂದು ಕಾಲದೇಶಾತೀತವಾದ ವಿಶ್ವಗುಣವನ್ನು ಕೊಟ್ಟು ಸಾಹಿತ್ಯದಲ್ಲಿ ಸ್ಥಾನವನ್ನೂ ಕಲ್ಪಿಸಿಕೊಟ್ಟಿದೆ.

ಮೈಸೂರು.
೬—೨—೪೦

ಎಲ್. ಎಸ್. ನಾರಾಯಣಶಾಸ್ತ್ರೀ

# ಕಡೆಯ ಮುನ್ನುಡಿ

ಗೆಳೆಯ ರಾಜರತ್ನಂ ಇವರು ಹೊರಡಿಸಿದ ತಮ್ಮ ವಿಕಟೋತ್ಸವಮೂರ್ತಿಗಳ ಮೆರೆವಣಿಗೆಯಲ್ಲಿ ನನ್ನದೂ ಒಂದು ಪ್ರಸಂಗವಿರಲೆಂದು ಅಪೇಕ್ಷಿಸಿದ್ದಾರೆ. ಮತ್ತಿನ ಐದಾರು ಗೆಳೆಯರು ಈಗಾಗಲೆ ಹೀಗೆ ಮಾಡಿರುವಾಗ ನನ್ನದು ಅಧಿಕವಾಗಲಾರದೇ ಎಂದು ನಾನು ಭಯಪಡಬೇಕಾಗಿಲ್ಲ. ಇಂಥಲ್ಲಿ ಅಧಿಕದಿಂದ ಅಧಿಕ ಶೋಭಾ. ಆದುದರಿಂದ ವಿಡಂಬನೆಯ ಆಧಿಕ್ಯವನ್ನೆ ಕುರಿತು ಒಂದೆರಡು ಮಾತು ಈ ಪ್ರಸಂಗದಲ್ಲಿ ವಿವರಿಸುತ್ತೇನೆ.

ವಿರಸವನ್ನೆ ಸರಸವನ್ನಾಗಿಸಲು ಹವಣಿಸುವದೆ ವಿಡಂಬನೆಯ ಪ್ರಥಮ ಸಾಹಸ. ಗಣಪ್ಪನನ್ನು ಮಾಡತೊಡಗಿ ಹಣಮಪ್ಪನನ್ನು ರಚಿಸಿ ತೋರಿಸುವದು ಹಾಸ್ಯದ ಸಿದ್ಧಿ. ರೂಪನಿಷ್ಪತ್ತಿಯಿಂದ ಮೆಚ್ಚುಗೆ ಪಡೆಯುವದು ಲೋಕ ಪ್ರಸಿದ್ಧ; ಆದರೆ ವಿರೂಪದಲ್ಲಿ ಆಕರ್ಷಣೆಯುಂಟುಮಾಡುವುದು ಹುಡುಗಾಟವಾಗಿ ಕಂಡರೂ ಮುಪ್ಪಿನಲ್ಲಿಯೂ ಅದು ವಿನೋದವಾಗಿ ಪರಿಣಮಿಸುವುದು ಮನುಷ್ಯಸ್ವಭಾವ. ವಿಡಂಬನೆಯು ವಿರಸವಿರೂಪಗಳ ಸರಸ.

ಹಾಸ್ಯದ ಕೊಂಕು ಪ್ರಿಯರ ಚುರುಕುಸ್ಪರ್ಶದಂತೆ, ಅಹೇತುಕವಾದ ಚಕ್ಕಲಗಿಲಿಯಂತೆ ಅಪೇಕ್ಷಣೀಯವಿದೆ. ಆದರೆ ಕರಡಿ ಚಕ್ಕಲಗಿಲಿ ಆಡಬಂದರೆ ಅಪೇಕ್ಷಿಸುವವರಾರು? ಕೊಂಕು ಕೌಟಿಲ್ಯವಾದಾಗ ಹಾಸ್ಯವು ಮೀನಕ್ಕೆಸೆದ ಗಂಟಲಗಾಳ. ಬೆಲ್ಲದ ಬಿಸಿಯಾಣದ ಗುಳಿಗೆಯನ್ನು ಬಾಯಲ್ಲಿ ಹಾಕಿದಾಗ ಕಣ್ಣೀರು ಮೊದಲು, ಬಾಯ ಚಪ್ಪರಿಸಿದ್ದಾದರೆ ಬಹಳ ಹೊತ್ತಿನ ಮೇಲೆ ಮಾತ್ರ. ಕೌಟಿಲ್ಯವಿಲ್ಲದ ಹಾಸ್ಯವನ್ನು ಗುರುವಿನ ಕೂಡಾದರೂ ಮಾಡಬಹುದೆಂದು ಸುಭಾಷಿತವು ಹೇಳುವುದು. ಭಕ್ತರು ದೇವರೊಡನಾಡುವಲ್ಲಿ ಎಂಥ ಹಾಸ್ಯ ಮಾಡಿಲ್ಲ? ದೇವನನ್ನು ವಿಡಂಬಿಸಿಲ್ಲ? ಶರಣರ ವಚನಗಳಲ್ಲಿ ಕಂಡು ಬರುವ ಸಮಾಜ ವಿಡಂಬನೆಯಲ್ಲಿ ಎಂಥ ಕೊಂಕಿದೆ. ಆದರೆ ನೊಂದ ಮನಸ್ಸು, ವಿಜಯೇಚ್ಛೆ, ಪ್ರತಿಸ್ಪರ್ಧೆ, ಅಹಂಮನ್ಯತೆಗಳಿಂದ ವಿಡಂಬನೆ ಉಗಮಿಸಿದ್ದಾದರೆ ಜಾರಣ ಮಾರಣ ಮಂತ್ರಗಳಂತೆ ಅದು ಸಂಹಾರಕವಾಗುವುದು. ಪ್ರತಿ ಉಚ್ಚಾಟನಮಂತ್ರಗಳಿಗೆ ಆವ್ಹಾನವೀಯುವುದು. ಅಂಥ ವಿಡಂಬನೆಯು ದಾರಿಗೆ ಹೋಗುವ ಮಾರಿಯನ್ನು ಊರವರು ಕೆಣಕಿದಂತೆ.

ಎಲ್ಲ ಮುಖಗಳು ಎಲ್ಲ ಪಕ್ಕ ದಿಕ್ಕುಗಳಿಂದ ಸಮಾನವಾಗಿ ಸುಂದರವಾಗಿ ಕಾಣುವುದಿಲ್ಲವೆಂಬುದು ಎಲ್ಲರ ಅನುಭವವಷ್ಟೆ. ಆದರೆ ತಮ್ಮ ನಿಲುವೆಲ್ಲವು ಮನ್ಮಥನದು ಎಂಬ ಬಿಂಕದ ಭಂಗಿಯಲ್ಲಿರುವವರಿಗೆ ಅವರ ನೆರಳೆ ವಿದೂಷಕನಂತೆ

ಸೊಟ್ಟ ಮೂರ್ತಿಗಳನ್ನು ಮಾಡಿ ಅವರ ಮೂರ್ತಿಯ. ಮುಖಭಂಗ ಮಾಡುತ್ತ ಅವರವರ ಬೆನ್ನಟ್ಟಿ ಬರುವುದು. ನಿಯಮ, ಕಟ್ಟಳೆ, ಶಿಷ್ಟತೆ, ಪ್ರತಿಷ್ಠೆ, ಆಚಾರ, ಶಾಸ್ತ್ರಗಳ ಹೆಸರಿನಲ್ಲಿ ಶ್ರೀಮದ್ ಗಾಂಭೀರ್ಯವನ್ನು ತಾಳಿ ಯಾವ ಹೊಸ ನಡತೆಯೂ ಎಂಥದೋ ಮೃಗ ಇರುವಂತೆ ಬೇಟೆಯಾಡ ಬರುವ ಡಾನ್‌ಕ್ವಾಯ್‌ ಹೋಟರು ವಿಡಂಬನೆಗೆ ತಾವಾಗಿ ಮಾದರಿಗಳಾಗುವರು. ಹೀಗೆಯೇ ಆಚಾರ ವಿಚಾರಗಳು ಸ್ವಾಭಾವಿಕವಾಗಿ ವಿಡಂಬನಾಸ್ಪದವಾಗುವವು. ಇಂಥ ವಿಕೃತಿಯು ಪ್ರಕೃತಿಯನ್ನು ಬಿಟ್ಟು ಇಲ್ಲ. ಅದನ್ನು ಕೃತಿಯಲ್ಲಿ ತರುವುದು ಸಾಹಿತ್ಯಸಂಸ್ಕೃತಿಯ ಒಂದು ಅಂಗ. ಆದರೆ ಒಂದು ಕೃತಿಯು ಕೃತಕೃತ್ಯವಾಗಬೇಕಾದರೆ ಎಲ್ಲ ಕಡೆಗೂ ಬೇಕಾದ ವಿವೇಕ ಇಲ್ಲಿಯೂ ಬೇಕು.

ವಿಡಂಬನೆಗೆ ಎಲ್ಲ ಭಾವರಸಗಳ ಪದರುಗಳಿವೆ. ರೌದ್ರಭಯಾನಕಗಳಲ್ಲಿ ಮುಕ್ತಾಯ ಹೊಂದದೆ ಶೃಂಗಾರವೀರದ ವಿಲಾಸದಲ್ಲಿ ರಸಿಕರು ವಿಡಂಬನೆಯನ್ನು ವಿಮರ್ಶಿಸಿಕೊಳ್ಳುವುದು ಕ್ಷೇಮಕರವು. ಅದರಿಂದ ವಿಡಂಬನೆಯ ಸಂಪ್ರದಾಯವೂ ಸುಧಾರಿಸಿಕೊಳ್ಳುವುದು. ಅಕಾಲ-ಸಕಾಲವೆನ್ನದೆ ಶ್ರೀ ರಾಜರತ್ನಂ ಅವರ ವಿಡಂಬನ ಕಾವ್ಯಗಳನ್ನು ಉಚಿತವಾಗಿ ಕಂಡದ್ದಾದರೆ ಉಚಿತ ವಿಡಂಬನೆಗಳಿಗೂ ಎಡೆಯಾಗುವದೆಂದು ನಾನು ನಂಬಿದ್ದೇನೆ.

ಬೆಂಗಳೂರು,
೧೪-೨-೧೯೪೦

ದ. ರಾ. ಬೇಂದ್ರೆ

# ಮಹಾಕವಿ ಪುರುಷ ಸರಸ್ವತಿ

"ಕೊಂಡಿಯೆತ್ತಿತು ಚೇಳು, ಕೆದರಿತ್ತು ಮುಳ್‌ಹಂದಿ,
ಚಕಲಗಿಲಿಯಿಕ್ಕಿತ್ತು ಕೆಣಕೆ ಕರಡಿ"

ಶ್ರೀ ಗಿರಿಜೆ ಸರಸತಿಯರಾಣ್ಮರನೇಗಳುಂ ಬಿಡದೊಲಿಸಿ ಕಬ್ಬವ
ನಾಗುಮಾಡಿಯೆ ಪೇಳ್ದನೆಂಬಾ ಪುರಿಸ ಸರಸತಿಯು
ಸೋಗಿನಲಿ ಸಾಹಿತ್ಯಜೀವನದೀಗಳಿನ ವಿಕೃತಿಗಳನತಿಗಳ
ಲಾಗ ಹಾಕಿಸುವೀ ಕೃತಿಯು (ಚಾಮರಸನೆಂದಂತೆ)

ಬಾಯ ನುಡಿಗಳ ಕೇಳಿ ಕಿವಿಯೊಳಗಾಯೆನುತ ಪರಿಣಮಿಸಿ ಹೋಹ ವಿ
ಡಾಯವಲ್ಲಿದು ಪಂಕ್ತಿ ಪಂಕ್ತಿಯ ಹಿಂದೆ ನಡುನಡುವೆ
ಕಾಯುತಿಹ ಕುಟುಕುಗಳ ನಗುವಿನುಪಾಯದುರು ಮೊಟಕುಗಳ ಸೋರುವ
ಗಾಯಕುಪ್ಪಿನ ಚಿಟಿಕೆಗಳ ತಿಳಿಯದೆಯೆ ಕಣ್ಮುಚ್ಚಿ

ಕುರಿಗಳೋಪಾದಿಯಲಿ ಕಬ್ಬಿನ ಹೊರಗಣೆಲೆಯನು ಮೇಪಕಟ ಮೆಲು
ಕಿರಿವುತಲ್ಪಸುಖಕ್ಕೆ ಸೋಲದೆ ಕಬ್ಬಿನೊಳು ರಸವ
ನೆರೆ ಸವಿವ ಗಜದಂತೆ ಚುಚ್ಚಿನ ತೆರನ ತಿಳಿದೆಚ್ಚರಲುಬೇಕೆಂ
ದರಿವವರ ಕೈಯೆಡೆಯ ಮಾಡುವೆನೀ ವಿಡಂಬನವ

ಓದುವವರೋದುವರು ಸಹಿಸದೆ ಸೀದು ಸಿಡಿಮಿಡಿಗೊಂಡು ನಡುವಣ
ಬೀದಿಯಲಿ ಬೈದಿಡುವವರು ಬೈದಾಡುವರು ಬಿಡೆಲಾ
ವೇದನಾಲ್ಕರ ಸಿರಿಯ ಬೊಮ್ಮನ ಮೇದಿನಿಯ ಮೇಲೆತ್ತಿದವನನ
ನಾದಿಮೂರುತಿ ಶಿವನ ನೆನೆಯುತೆ ನುಡಿಯ ತೊಡಗುವೆನು



ಮಹಾಕವಿ ಪುರುಷ ಸರಸ್ವತಿಯ
ಭವ್ಯತಮ ಭಾವಚಿತ್ರ

ಪ್ರಾಕ್ಕಾವ್ಯ ಪರಬ್ರಹ್ಮ[1]
ಪ್ರಾಚೀನ ಪ್ರೌಢ ಪ್ರಬಂಧ ಪಿನಾಕಿ[2]
ಪರಮಾಲಂಕಾರ ಪ್ರದರ್ಶನ ಪ್ರವೀಣ ಪದ್ಮನಾಭ[3]
ಪುರಾತನ ಕವಿಕೇಸರಿ[4] ಪುರಾಣ ಕವಿತಾವಿಚಕ್ಷಣ[5] ಪ್ರಾಚೀನ ಕಾವ್ಯಶಿರೋಮಣಿ[6]
ಪ್ರಾಕ್ಪುರಾತನ ಕವಿರಾಜ[7] ಪ್ರಪ್ರಾಚೀನ ಕವಿರತ್ನ[8]
ಕರ್ಣಾಟಕ ಕುಲಕ್ರಮಾಗತ ಕವಿರಾಜಮಾರ್ಗ ಪ್ರತಿಪನ್ನ ಪ್ರಚಣ್ಡ ಪರಮೇಶ್ವರ[9]
ಸಕಲ ಸುನಿಪುಣ ಸಾಹಿತ್ಯ ಸರ್ವಸ್ವ ಸಂಯುಕ್ತ ಸರ್ವೇಶ್ವರ[10]
ಕವಿನರಪಾಳ[11] ಕುಳಕಪ್ರಿಯ[12]
ಇತ್ಯಾದ್ಯನೇಕ ಬಿರುದಾವಲಿ ಭೂಷಣವಿಭೂಷಿತ

ಮಹಾಕವಿ[13]

# ಪುರುಷ ಸರಸ್ವತಿ

ಪ್ರಣೀತಮಪ್ಪ

## ಶತಕಾರ್ಧತ್ರಯಿಯಿ[14]

ಎಂಬ

# ತ್ರಿಲೋಕತುಲ್ಯ ಮಹಾಕ್ಷುದ್ರಕಾವ್ಯ[15] ಪ್ರಪಂಚವು

---

"ಶಾಸ್ತ್ರಂ ಶಸ್ತ್ರಮೆ ಶಾಸ್ತ್ರಿ ಶಸ್ತ್ರಿಕನಲಾ ರತ್ನಾಕರಾಧೀಶ್ವರಾ"
ಎಂದ ಸತ್ಕವಿಯ ಸೂಕ್ತಿಯನ್ನು ಸಂಪೂರ್ಣವಾಗಿ ಸಾರ್ಥಕಗೊಳಿಸಿದ
ದುಷ್ಟಬುದ್ಧಿ[16]ಯೆಂಬವನ ದೊಡ್ಡಯ್ಯನ ದೌಹಿತ್ರನಾದ
ವಿಪರೀತಬುದ್ಧಿಯ ವಿಸ್ತರವ್ಯಾಖ್ಯಾನದೊಡನೆ
ಲೋಕಹಿತಾರ್ಥವಾಗಿ ಪ್ರಚುರಪಡಿಸಲ್ಪಟ್ಟಿತು.[17]

(ವಿವರಗಳಿಗೆ ಮಗ್ಗಲು ಪುಟ ನೋಡಿ)

—: ವಿಶೇಷ ಸೂಚನೆ :—

ಕಾವ್ಯಕರ್ತೃವೂ ವ್ಯಾಖ್ಯಾನಕಾರನೂ 'ಗುಪ್ತಸಂಪಾದಕ ಪಂಚಕ'ವೂ ಸರ್ವವೂ **ಶ್ರೀಮಾನ್ ಜಿ. ಪಿ. ರಾಜರತ್ನಂ,** ಎಂ.ಎ. ಎಂಬವರೆಂದು ಈಗತಾನೆ ಈ ಕೃತಿ ಅಚ್ಚಾದಮೇಲೆ ತಿಳಿದುಬಂದಿದೆ.

1, 2, 3—ಪುರುಷ ಸರಸ್ವತಿಯು ತನ್ನ ಕಾವ್ಯಗಳಲ್ಲಿ ತ್ರಿಮೂರ್ತಿಗಳನ್ನು ಒಟ್ಟಿಗೆ ಅನೇಕವಾಗಿ ಸ್ತುತಿಸಿ ಆಸ್ತಿಕ ಲೋಕದಿಂದ ಈ ಮೂರು ಬಿರುದು ಪಡೆದನು.

4, 5, 6, 7, 8—ನಾಸ್ತಿಕ ಲೋಕವು ತಾನು ಆಸ್ತಿಕ ಲೋಕಕ್ಕಿಂತ ಹಿಂದುಳಿದಿಲ್ಲವೆಂಬುದನ್ನು ತೋರಿಸಲೋಸುಗ ಕವಿಯನ್ನು ಈ ಬಿರುದಾವಲಿ ಪಂಚಕದಿಂದ ಶೃಂಗರಿಸಿತು.

9, 10—ಹೀಗೆ ಸಮಸ್ತ ನಾಸ್ತಿಕಾನಾಸ್ತಿಕ ಪ್ರಪಂಚವೂ ತನ್ನನ್ನು ಗೌರವಿಸುತ್ತಿರಲು "ಆತ್ಮಗೌರವಕ್ಕೆ ಮಿಗಿಲಾದುದು ಮುಗಿಲ ಕೆಳಗಿಲ್ಲ"ವೆಂಬುದನ್ನು ಜಗತೀವಳಯಕ್ಕೆ ತೋರಿಸಿ ಕೊಡುವುದಕ್ಕಾಗಿ ಕವಿಯು ತನಗೆ ತಾನೇ ಕೊಟ್ಟುಕೊಂಡ ಎರಡು ಬಿರುದುಗಳಿವು.

11—ಕವಿಯು ಪ್ರಾಸ ರಕ್ಷಣೆಗೋಸ್ಕರ ತನ್ನ 'ಕರ್ಣ ನಾಟಕ ಪುರಾಣ'ದ ಮೂರನೆಯ ಪದ್ಯದಲ್ಲಿ ಕೊಟ್ಟುಕೊಂಡ ಬಿರುದು.

12—ಈತನ ಕಾವ್ಯಗಳಲ್ಲಿ ಮೇಲಿಂದ ಮೇಲೆ ತಲೆದೋರುವ ಕುಳಕಗಳನ್ನು ಕಂಡು ಮುಗ್ಧರಾಗಿ, ನಾವು—ಸಂಪಾದಕರು—ಕೊಟ್ಟ ಬಿರುದು.

13—ನಿನ್ನೆಗಿಂತ ಹಿಂದಿನ ಕನ್ನಡ ಕೃತಿಕಾರರನ್ನೆಲ್ಲ ಪಂಕ್ತಿಭೇದವಿಲ್ಲದಂತೆ "ಮಹಾಕವಿ" ಯೆಂದು ಸಂಬೋಧಿಸುವ ಸ್ತೋತ್ರಾರ್ಹನಾದ ನೂತನ ಸತ್ಸಂಪ್ರದಾಯಕ್ಕೆ ಸೇವೆ ಸಲ್ಲಿಸಲು ಈ ಪ್ರಕೃತದ ಕರ್ತನನ್ನೂ "ಮಹಾಕವಿ" ಎಂದು ಕರೆದಿದ್ದೇವೆ.

14—ಐವತ್ತೈವತ್ತು ಭಾಮಿನಿ ಷಟ್ಪದಿಗಳ ವಿಸ್ತಾರದ ಮೂರು ಕಾವ್ಯಗಳು—(ಅ) ಕರ್ಣ ನಾಟಕ ಪುರಾಣವು—ಅಥವಾ—ಸಾಲಂಕೃತ ಶತಕಾರ್ಧ ಷಟ್ಪದವು—ಎಂಬ—ಐತ್ಯೋದ್ಧರಣ ಮಹಾಕ್ಷುದ್ರಕಾವ್ಯ ಪ್ರಪಂಚವು. (ಆ) ಹಾರ್ಮೋನಿಯಂ ಹರಣವು—ಅರ್ಥಾತ್—ವೆಂಕಟೇಶ ಹಗರಣವು—ಅಥವಾ—ನಿಂಗನಿರ್ಯಾಣವು—ಎಂಬ—ಹಾರ್ಮೋನಿಯಮನ್ನು ಹರಣಮಾಡಲು ಹೋದ ವನ ಹರಣವು ಹರಣವಾದ ಹ[ಗ]ರಣವು (ಇ) ಬೈರಿಗೇಂದ್ರ ಭಯಾನಕವು—ಎಂಬ—ಭಯಂಕರ ಬೃಹದ್ಬೈರಿಗೇಶ್ವರ ಪುರಾಣವು.

15—ಪುರುಷ ಸರಸ್ವತಿಯ ಕೃತಿಗಳು 50 ಏ ಪದ್ಯಗಳಾದುದರಿಂದ "ಕ್ಷುದ್ರಕಾವ್ಯ"ಗಳೆಂದೂ, ಮಹಾಕವಿ ಬರೆದುದರಿಂದ "ಮಹಾಕ್ಷುದ್ರಕಾವ್ಯ"ಗಳೆಂದೂ ಪ್ರಸಿದ್ಧವಾಗಿವೆ.

16—ಈ ದುಷ್ಟಬುದ್ಧಿ ಯಾರೋ ಪತ್ತೆಯಾಗಿಲ್ಲ.

17—ದ್ರುಪದರಾಜನಂದನೆಯನ್ನು ಸಂಪಾದಿಸಲು ವಿಕ್ರಮಿಸಿದ ಪಂಚಪಾಂಡವರಂತೆ ಈ ಮಹಾಕವಿ ಪುರುಷ ಸರಸ್ವತಿಯ ಶತಕಾರ್ಧತ್ರಯವನ್ನು ಸಂಪಾದಿಸಲು ಸಾಹಸಗೈದಿರುವ ನಾವೈವರು ಉದ್ದೇಶಪೂರ್ವಕವಾಗಿ ನಮ್ಮ ಹೆಸರನ್ನು ಅಡಗಿಸಿದ್ದೇವೆ. "ಹೂವಿನಿಂದ ನಾರೂ ನಾರಿಯ ಮುಡಿ ಗೇರಿತು—ಎಂಬ ನಾಣ್ನುಡಿಯಂತೆ ಮಹಾಕವಿಯ ಗ್ರಂಥ ಸಂಪಾದಿಸುವ ವ್ಯಾಜದಿಂದ ಈ ಐವರು ಯಃಕಶ್ಚಿತುಗಳಾದ ಪಂಚಸಂಪಾದಕರು ತಾವೂ ಖ್ಯಾತರಾದರು" ಎಂಬ ಅಪವಾದಕ್ಕೆ ಪಕ್ಕಾಗ ಬಾರದೆಂಬುದೇ ಮೇಲೆ ನಮೂದಿಸಿದ ನಮ್ಮ ಪವಿತ್ರ ಪರಮೋದ್ದೇಶವು. ಮುಖ್ಯವಾಗಿ ನಮ್ಮದು 'ಅಳಿಲ ಸೇವೆ'; ನಾವು 'ಎಲೆಯ ಮರೆಯ ಕಾಯಿಗಳು'; 'ಬಲಗೈಮಾಡುವುದು ಎಡಗೈಗೆ ತಿಳಿಯಬಾರದು' ಎಂಬುದು ನಮ್ಮ ಗಾಯತ್ರಿ; ಅಲ್ಲದೆ 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬುದು ನಮ್ಮ ತಾರಕಮಂತ್ರ. ಅಸ್ತು. ಇತ್ಯಲಂ.

# ಮಹಾಕವಿ ಪುರುಷ ಸರಸ್ವತಿಯ ಪರಿಚಯ

ನಾವು—ಸಂಪಾದಕರು—ಇಂತಹ ಕಾರ್ಯಕ್ಕೆ ಹೊಸಬರು. ವಾಚಕರು ಹಂಸ ಕ್ಷೀರನ್ಯಾಯದಿಂದ ಇದನ್ನು ಪರಾಂಬರಿಸಬೇಕು.

ಶತಕಾರ್ಧತ್ರಯವನ್ನು ರಚಿಸಿರುವ ಈ ಕನ್ನಡಕವಿಯ ವಿಷಯವಾಗಿ ನಮಗೇನೇನೂ ಗೊತ್ತಿಲ್ಲ. ಆದರೆ ಆತನ ಕೃತಿಗಳಿಂದ ಅವನ ಹೆಸರು ಪುರುಷ ಸರಸ್ವತಿಯೆಂದೂ, ಅವನ ತವರೂರು ತಾವರೆಪುರವೆಂದೂ, ತಂದೆಯ ಹೆಸರು ಲಕ್ಷ್ಮೀರಮಣನೆಂದೂ, ಹೆಣ್ಣುಕೊಟ್ಟ ಮಾವನ ಹೆಸರು ಪರ್ವತ (ಬೆಟ್ಟದಯ್ಯ?)ನೆಂದೂ ತಿಳಿದುಬರುತ್ತದೆ ('ಹಾರ್ಮೋನಿಯಂ ಹರಣ'ವನ್ನು ನೋಡಿ).

ಈತನ ಕಾಲ ಇನ್ನೂ ನಿರ್ಧಾರವಾಗಿಲ್ಲ. ಈತನು ಮಹಾ ಕುರುಕ್ಷೇತ್ರ ಸಮರಕ್ಕಿಂತ ಹಿಂದಿನ ಯಾವ ಐತಿಹಾಸಿಕ ಘಟನೆಯನ್ನೂ ತನ್ನ ಕಾವ್ಯದಲ್ಲಿ ಸ್ಮರಿಸಿಲ್ಲವಾದ ಕಾರಣ ಈತನು (*a*) ಮಹಾಭಾರತ ಯುದ್ಧಕ್ಕೆ ಈಚಿನವನೆಂದು ಕೆಲವರೂ (*b*) ಮಹಾಭಾರತ ಯುದ್ಧಕ್ಕೆ ಹಿಂದಿನವನಲ್ಲವೆಂದು ಉಳಿದವರೂ ಇನ್ನೂ ವಾದ ಮಾಡುತ್ತಿದ್ದಾರೆ.

ಈತನ ಮತವೂ ತಿಳಿದುಬಂದಿಲ್ಲ. ಹರಿಹರ ಹಿರಣ್ಯಗರ್ಭರು ಮೂವರನ್ನೂ ಒಂದೇ ಉಸಿರಿನಲ್ಲಿ ಸ್ಮರಿಸುವ ಅಪೂರ್ವ ಸಂಪ್ರದಾಯವು ಈ ಮಹಾಕವಿಯ ಮುಖ್ಯ ವೈಶಿಷ್ಟ್ಯ. (ಈತನ ಮತ ಯಾವುದೆಂದು ನಿಶ್ಚಯಿಸಿಕೊಟ್ಟವರಿಗೆ ಏತನ್ಮತೀಯರು ೫,೦೦೦ ರೂಪಾಯಿಗಳ ಬಹುಮಾನ ಕೊಡುವುದಾಗಿ ಜಾಹೀರಾತು ಮಾಡಿದ್ದಾರೆ. ಅಪೂರ್ವ ಸಂಶೋಧಕರಿಗೆ ಅಪೂರ್ವ ಸಂಧಿ!)

ಈ ಕವಿಯ ಬಿರುದುಗಳನ್ನು ಎದುರುಪುಟದಲ್ಲಿ ವಿವರಿಸಿದೆ.

ಈ ಕವಿಯ ಶೈಲಿಯನ್ನು ಸೂಚಿಸಲು ಸ್ಥಳಸಂಕೋಚದಿಂದ ಯಾವ ಪದ್ಯವನ್ನೂ ಇಲ್ಲಿ ಉದ್ಧರಿಸಿಲ್ಲ. ಆದರೂ "ಒಂದಕ್ಕಿಂತ ಮೂರು ಮೇಲು" ಎಂಬ ಮಾತಿನಂತೆ ಈ ಮಹಾಕವಿಯ ಮೂರು ಶತಕಾರ್ಧಗಳನ್ನೂ ಮುಂದೆ ಕೊಡುವವರಾಗಿದ್ದೇವೆ.

ಈತನ ವಿಷಯವಿನ್ನೇನೂ ಗೊತ್ತಿಲ್ಲವಾದ್ದರಿಂದ ನಮ್ಮ ಗುಪ್ತಸಂಪಾದಕ ಪಂಚಕದಲ್ಲಿ ಮಧ್ಯಮರಾದ "ಕನ್ನಡಾಂಗ್ಲೋಭಯಭಾಷಾಚಕ್ರವರ್ತಿ"ಗಳೆನಿಸಿದವರಿಂದ ರಚಿತವಾದ "ಮಹಾಕವಿ ಪುರುಷ ಸರಸ್ವತಿ ಸ್ತೋತ್ರಪಂಚಕ"ವನ್ನು ಇಲ್ಲಿ ಉಲ್ಲೇಖಿಸುತ್ತೇವೆ. ಇದು ಕೂಡ ಅಪರೂಪ ಕೃತಿಯಾದುದರಿಂದ ಪ್ರತಿಪದ್ಯದ ಅನ್ವಯವನ್ನೂ ಅಲ್ಲಲ್ಲೇ ಕೊಡುತ್ತೇವೆ.

## ಮಹಾಕವಿ ಪುರುಷ ಸರಸ್ವತಿ ಸ್ತೋತ್ರ ಪಂಚಕವು

(ತಲೆಯ ಮೇಲೆ * ಗುರುತಿರುವ ಅಕ್ಷರವನ್ನು ಶಿಥಿಲದ್ವಿತ್ವವೆಂದು ಭಾವಿಸಬೇಕು)

೧. ಏಜಸಾಯಿತು ನರರ ನಡುವೆ ಗ
ಲೀಜಿನೊಳಗಣ ಪಂಕಜದವೊಲ್
ಸೇಜು ವರಕವಿ ಏವನ್‌ಇಟೀಸಿಗಳ ಪೊಗಳಿಕೆಗೆ
ಭಾಜನನು ತಾನೆನಿಸಿ ಝೂವಿನ
ಕೇಜಿನೊಳಗಣ ಕ್ರೀಚರುಗಳಂ
ತೀಜ಼ಿಲೈಫಿನ ಜನರ ಮೂದಲಿಸುವರು ರೈಜ಼ಾಗಿ

[ಅನ್ವಯ—ಗಲೀಜನ ಒಳಗಣ ಪಂಕಜದವೊಲ್, ನರರ ನಡುವೆ "sageಉ, ವರಕವಿ, A1, Etc."ಗಳ ಪೊಗಳಿಕೆಗೆ ಭಾಜನನು ತಾನೆನಿಸಿ Zooವಿನ cageಇನ ಒಳಗಣ Creatureಉಗಳಂತೆ easy-lifeಇನ ಜನರ ಮೂದಲಿಸುವರು riseಆಗಿ agesಆಯಿತು.]

೨. ವರ್ತ್ತು ನೋಟೀಸಿಂಗು ನಗಿಸುವ
ಮರ್ತ್ತಿಗೀ ಕನ್ನಡದೊಳಾಫು
ಲ್ಡರ್ತ್ತು ಮೈಗಾಡ್ ಪುರಿಸ ಸರಸತಿ ಓಯೆಸಿಸ್ಸು ಕಣಾ
ಬರ್ತ್ತು ತಾವರೆಪುರದ ಕರಿ ಮದ
ರರ್ತ್ತಿನಲಿ ಮೇಣವನ ಫೇಮಿನ
ಗರ್ತ್ತು ಗಣನಾತೀತ [1]ತುದಿಗಳ್ ಹೆವನು ಹೆಲ್ಲುಗಳು[1]

[ಅನ್ವಯ—Worthಉ noticingಉ! ಈ ಕನ್ನಡದೊಳು ನಗಿಸುವ mirthಇಗೆ awful dearthಉ! My God! ಪುರಿಸ ಸರಸತಿ oasisಉ ಕಣಾ! (ಆ ಪುರುಷ ಸರಸ್ವತಿಯ) birthಉ ತಾವರೆಪುರದ ಕರಿ Mother Earthಇನಲಿ; ಮೇಣ್ ಅವನ fameಇನ girthಉ ಗಣನಾತೀತ! (ಆ fameಇನ) ತುದಿಗಳ್ Heavenಉ Hellಉಗಳು!]

೩. ವಿಂಗೆಡಾರೋಸಮುಕಿ ಕಳೆದ
ಸ್ಪ್ರಿಂಗುಗಳು ಸರಸತಿಯ ಹೈಲೀ
ಸ್ಟ್ರಂಗುಮೂಡಿನ ಮಾತು ಸವಿಮ್ಮಾ ಪೊಯೆಟ ಫ್ಲೈ[2]ಟ್ಸಿಂದು
ಫಿಂಗರುಗಳಿಗೆ ಮೇಡ್ಟು-ಆರ್ಡರ್
ರಿಂಗುಗಳ ಸಮನಾಗಿ ಕವಿಗಳ
ಕಿಂಗು ತಾನಾದಿವಸನೆಕ್ಸ್ಟೀಲ್ಗ್ರೈವರಡ್ಮೈರರ್ಸ್

[1] ಹೆವನು ಹೆಲ್ಲುಗಳು ತುದಿಗಳಾದರೆ ನಡುವೆ ಭೂಮಿಯೂ ಕೂಡಿದೆಯೆಂಬುದು ಇಲ್ಲಿ ಧ್ವನಿ.

[2] ಇದು ಅಚ್ಚಿನಲ್ಲಿ 'ಶಿಥಿಲತ್ರಿತ್ವ'ದಂತೆ ಕಂಡರೂ, ಇದು ಶಿಥಿಲದ್ವಿತ್ವವೇ.

[ಅನ್ವಯ—Admirers (= admire ಮಾಡುವವರು) ಕವಿಗಳ Kingಉ ತಾನಾದ ಇವನನು "ನಮ್ಮ ಈ poetಅ (=poetಇನ) flightsಉ winged arrows, ಅಮುಕಿ ಕಳೆದ springಉ ಗಳು, ಸರಸತಿಯ highly strungಉ moodಇನ ಮಾತು" ಎಂದು, fingerಉಗಳಿಗೆ made-to-order-ringಉಗಳ ಸಮನಾಗಿ (= appropriate ಆಗಿ) extol ಗೈವರು.]

೪. ಕರ್ಲಿಹೆಡ್ಡು ಕವೀಶ್ವರಗೆ ಬಲು
ಬರ್ಲಿಬಾಡಿ ಬ್ರ*ದರ್ಲಿ ಫೀಲಿಂಗ್ಸ್
ಸರ್ಲಿಲುಕ್ಸಿನ ಷಾಡೊ ಸುಳಿವಿಲ್ಲವನ ಫೇಸಿನಲಿ
ವೆರಿಲಿಯಿದುವೇ ಕವಿಯ ಟ್ರೂ*ಪಿ
ಕ್ಚರು ಗಡಾತನ ಮೆರಿಟಿಯೂನಿನ[1]
ಜಿರಲೆ ಬುಳುಬುಳು ಸುಳಿದು ತನುಮನ ಜುಂಜುಮೆನುತಿಹುದು

[ಅನ್ವಯ—ಕವೀಶ್ವರಗೆ (= ಪುರಿಸ ಸರಸತಿಗೆ) Curly-headಉ, ಬಲು burly body, brotherly feelings (with the world); ಅವನ faceಇನಲಿ surly looksಇನ shadow ಸುಳಿವಿಲ್ಲ. Verily, ಇದುವೇ ಕವಿಯ true pictureಉ ಗಡಾ! ಆತನ merry tuneಇನ ಜಿರಲೆ ಬುಳುಬುಳು ಸುಳಿದು ತನುಮನ ಜುಂಜುಂ ಎನುತಿಹುದು.]

೫. ಕೌಂಗು ನೀ ನಾ ಕುರುಚಲೆನ್ನೀ
ಟಾಂಗದೆದುರಿಗೆ ಬಸ್ಸು ನೀ [2]ಕಿಂಗ್
ಕಾಂಗು[2] ನೀ ಕ್ರಿಮಿ ನಾನು ಪುಂಗವ ನೀನು ನಾನೇನು
ಆಂಗ್ಲ ಕನ್ನಡವೆರಡರಲು ನಾ
ರ್‍ಯಾಂಗ್ಲರಾದವನಿದಿಗೊ ಹೈಲ್ಹೈಲ್
ಲಾಂಗ್ಲಿವೆನುವೆನು ಪುರಿಸ ಸರಸತಿ ಹಿಪ್ಹಿಪ್ಹುರೆಯೆಂಬೆ

[ಅನ್ವಯ—(ಹೇ ಪುರುಷ ಸರಸ್ವತಿ!) ನೀ(ನು) ಕೌಂಗು, ನಾ(ನು) ಕುರುಚಲು! ಎನ್ನ ಈ tongaದ ಎದುರಿಗೆ ನೀ(ನು) busಉ! ನೀ(ನು) King Kongಉ, ನಾನು ಕ್ರಿಮಿ! ನೀನು ಪುಂಗವ, ನಾನು ಏನು!?! ಆಂಗ್ಲ ಕನ್ನಡವೆರಡರಲು wrangler ಆದವನು ನಾ(ನು), ಇದಿಗೋ! "Hail! Hail! Long live ಪುರಿಸ ಸರಸತಿ!' ಎನುವೆನು!! "Hip! Hip! Hooray!" ಎಂಬೆ!!!

1 'ಟಿಯೂನ್' ಎಂಬುದು 'tune' ಎಂಬುದರ ಅಪಭ್ರಂಶ.

2 King Kong ಎಂಬುದು ಪರ್ವತಸದೃಶವಾದ ಆಕಾರದ ಮಹಾಕಪಿ; ಹಾಗೂ King Kong ಎಂಬವನು ಬೃಹದಾಕಾರದ ಪಾಶ್ಚಾತ್ಯ ದೇಶದ ಪ್ರಸಿದ್ಧ ಮಲ್ಲ.

ಮಹಾಕವಿ ಪುರುಷ ಸರಸ್ವತಿಯು **‘ಕರ್ಣನಾಟಕ ಪುರಾಣ’, ‘ಹಾರ್ಮೋನಿಯಂ ಹರಣ’** ಮತ್ತು **‘ಬೈರಿಗೇಂದ್ರ ಭಯಾನಕ’**—ಎಂಬ ಶತಕಾರ್ಧತ್ರಯವನ್ನು ಭಾಮಿನಿಷಟ್ಪದಿಯಲ್ಲಿ ಬರೆದುದು ಮಾತ್ರವಲ್ಲದೆ **‘ಸಂದೇಹ ಸಂದೋಹ ಸಂದೇಶ’**ವೆಂಬ ಸಂಪೂರ್ಣವಾದ ಅಸಂಪೂರ್ಣ ಗ್ರಂಥವೊಂದನ್ನು ವಾರ್ಧಕ ಷಟ್ಪದಿಯಲ್ಲೂ ಬರೆದಿದ್ದಾನೆ. 50 ಪದ್ಯ ಬರೆಯಬೇಕಾದವನು 3½ ಪದ್ಯ ಬರೆದುದರಿಂದ ಅದು ‘ಅಸಂಪೂರ್ಣ ಗ್ರಂಥ’ವೆಂದೂ, 3ರಲ್ಲೇ ಮುಕ್ತಾಯವಾಗಿರುವುದರಿಂದ “ಸಂಪೂರ್ಣ ಅಸಂಪೂರ್ಣ ಗ್ರಂಥ”ವೆಂದೂ ಪ್ರಸಿದ್ಧವಾಗಿದೆ. ಇದನ್ನು ಸ್ಥಳಸೌಲಭ್ಯಕ್ಕಾಗಿ “ಕರ್ಣನಾಟಕ ಪುರಾಣ”ದ ಅನಂತರ ಪ್ರಕಟಪಡಿಸಿದೆ.

ಪುರುಷ ಸರಸ್ವತಿಯ ಈ ಕೃತಿಗಳು **“ತುರುಚುಗಬ್ಬ”, “ಶತಾರಿ”, “ಹತಾರಿ”, “Satire”** ಎಂಬ ಕಾವ್ಯಜಾತಿಗೆ ಸೇರಿದುವು.

“ಕವಿ ಮಹಾಜನಮಾರ್ಗ್ಗ”ದಲ್ಲಿ ಹೀಗೆ ಹೇಳಲಾಗಿದೆ:

ಹೊರಗಣ್ಗತಿ ಸೌಮ್ಯಂ ಸುಂ | ದರತರಮತಿ ಬಂಧುರಮಿದುವೆಂದೆಸಿಸಿರ್ಪ ||
ಕರಚೆಲುವಿನ ತುರುಚಿಯವೋ | ಲ್ಚುರುಚುರುಗುಟ್ಟಿಪುದೆ **ತುರುಚುಗಬ್ಬಂ** ಪೆಸರಿಂ ||

“ಬೃಹತ್ಸ್ನಿಗ್ಧ ಸಂದಿಗ್ಧ ಶಬ್ದಾರ್ಥ ಸಂದೋಹ”ದಲ್ಲಿ ಹೀಗಿದೆ:

ಯೇನ ಶತ ಅರಯಃ ಸಂಭವನ್ತಿ ವಾ ಉತ್ಪದ್ಯನ್ತೇ ವಾ ಉತ್ಪಾದ್ಯನ್ತೇ ಸಃ **ಶತಾರಿಃ** || ಯಥಾ ಶಶೀ ಸಸಿ ಭವತಿ ತಥಾ ಶತಾರೇಃ ಶಕಾರಃ ಸಕಾರೋ ಭವತಿ | ಏವಂಚ ಯಥಾ ಸದ್ಮ ಹದ್ಮ ಭವತಿ ತಥೈವ ಸತಾರೇಃ ಸಕಾರಃ ಹಕಾರೋ ಭವತಿ | ತಸ್ಮಾತ್ ಶತಾರಿಃ >ಸತಾರಿಃ >**ಹತಾರಿಃ** || ಯೇನ ಅರಯಃ ಹತಾಃ ಭವನ್ತಿ ಸಃ **ಹತಾರಿಃ** || ಇತಿ.

"Satire—in its literary aspect, may be defined as the expression in adequate terms of the sense of amusement or disgust excited by the ridiculous or unseemly, provided that humour is a distinctly recognizable element, and that the utterence is invested with literary form. Without humour satire is invective; without literary form it is mere clownish jeering."
ಎಂದು “ಎನ್ಸೈಕ್ಲೊಪಿಡಿಯ.’ ದಲ್ಲಿ ಹೇಳಿದೆ.

* * * * *

ಇದೋ! ಮೊದಲನೆಯ ಶತಕಾರ್ಧಷಟ್ಪದವು—ಕರ್ಣನಾಟಕ ಪುರಾಣವು!

ಈ ಪುರಾಣವನ್ನು ‘ಪಾತಾಳದ ಪ್ರತಿ’ ಮತ್ತು ‘ಅಟ್ಟದ ಪ್ರತಿ’ ಎಂಬ ಎರಡು ಪ್ರತಿಗಳ ಸಹಾಯದಿಂದ ಸಂಪಾದಿಸಲಾಗಿದೆ. ‘ಅಟ್ಟದ ಪ್ರತಿ’ಯ ಪಾಠಾಂತರಗಳನ್ನು ಪುಟದಡಿ ಕಾಣಿಸಿದೆ.

ಇಂತು
ಸಿರಿಗನ್ನಡಿಗರ ಡಿಂಗರಿಗರು
“ಗುಪ್ತ ಸಂಪಾದಕಪಂಚಕ.”

# ಕರ್ಣನಾಟಕ ಪುರಾಣವು

ಅರ್ಥಾತ್

## ಸಾಲಂಕೃತ ಶತಕಾರ್ಧ ಷಟ್ಪದವು

ಎಂಬ

# ಣತ್ವೋದ್ಧರಣ ಮಹಾಕ್ಷುದ್ರಕಾವ್ಯ ಪ್ರಪಂಚವು

### ಪೀಠಿಕಾ ಪ್ರಕರಣವು[1]

ಎಂಬ ಮೊದಲನೆಯ ಗತಿಯು

ಶ್ರೀ ವನಿತೆಯುರಸನಿಗೆ ಶರಣರ
ದೇವನಗಜಾರಮಣನಿಗೆ ರಾ
ಜೀವಸಂಭವ ವಾಣಿಯಾಣ್ಮಗೆ ಮಣಿವೆ ದಣ್ಣಿಕ್ಕಿ।
ಕಾವಿಯ[2]ದ ಕೆನೆಹಾಲ ಕರೆಯುವ
ಗೋವು ನಾ ಕನ್ನಡದ ಮಧುಪಕೆ
ಹೂವು ನಾನೀನಾಸೆ ಕನ್ನಡ ತಾಯ ಡಿಂಗರಿಗ ||೧||
[3]ಆರೆ ಷಟ್ಪದಿಗಳಲಿ ಮೂವ
ತ್ತಾರೆ ಪಾದಗಳಲ್ಲಿ ಮಾತ್ರೆಯ
ಮೀರೆ ವಿಸ್ತಾರದೆ ಐದಸೂರೆಂಬತ್ತು ನಾಲ್ಕರಲಿ।
ಚಾರು ಕರ್ಣಾಟಕದ ಮಹಿಮೆಯ
ಸಾರವನು ಮುನ್ನಾರುಮರುಹದು
ದಾರ ರೀತಿಯಿನ್ನೈದೆ ಷಟ್ಪದಿಗಳಲಿ ಬಣ್ಣಿಸುತೆ[3] ||೨||

---

[1] ಕವಿಯು ಈ ಪ್ರಕರಣವನ್ನು ತನ್ನ ಸಂಪ್ರದಾಯವಾದ ತ್ರಿಮೂರ್ತಿಗಳ ಸ್ಮರಣೆಯಿಂದ ಪ್ರಾರಂಭಿಸುತ್ತಾನೆ. ಅನಂತರ ಸಂಪ್ರದಾಯಾನುಸಾರವಾಗಿ ೧, ೨, ೩ ಮತ್ತು ೫ನೆಯ ಪದ್ಯಗಳಲ್ಲಿ ಸ್ವಪ್ರಶಂಸೆಯನ್ನು ಪೂರೈಸಿ ೬, ೭, ೮ಗಳಲ್ಲಿ ವಾಚಕ ನಿಂದೆಯನ್ನು ನೆರವೇರಿಸಿ, ೪ನೆಯ ಪದ್ಯದಲ್ಲಿ ಈ ಕಾವ್ಯ ಹುಟ್ಟಿದ ಕಾರಣವನ್ನು ನಿರೂಪಿಸುತ್ತಾನೆ. [2] ಕಾವಿಯ—'ಕಾವ್ಯ'ದ ತದ್ಭವ.

[3] ಶರ (60 ಮಾತ್ರೆ), ಕುಸುಮ (74 ಮಾತ್ರೆ), ಭೋಗ (88 ಮಾತ್ರೆ), ಭಾಮಿನಿ (102 ಮಾತ್ರೆ), ಪರಿವರ್ಧಿನಿ (116 ಮಾತ್ರೆ) ಮತ್ತು ವಾರ್ಧಕ (144 ಮಾತ್ರೆ)—ಹೀಗೆ 6ಏ ಷಟ್ಪದಿಗಳಲ್ಲಿ, 36ಏ ಪಾದಗಳಲ್ಲಿ, 584ಏ ಮಾತ್ರೆಗಳಲ್ಲಿ ಕರ್ಣಾಟಕ ಸ್ತವನಗೆಯ್ದಿರುವ ವಿಶಿಷ್ಟ ಯಶಸ್ಸಿಗೆ ಈ ಮಹಾಕವಿಯು ಮಾತ್ರ ಪಾತ್ರನು. (ಮುಂದೆ ಪದ್ಯ ೯–೧೪ ನೋಡಿ.)

ಬೋಳುಗವಿಗಳ[1] ಹೂಳಿಸುತೆ ಬಲು
ಗೋಳುಗವಿಗಳ[2] ಸೀಳಿಸುತೆ ಮೇಣ್
ಕೋಳಿಗವಿಗಳ[3] ಕಿರಿಚುನಾಲಗೆ ಹಿಡಿದು ಕೀಳಿಸುತೆ |
[4]ಹಾಳುಗವಿತೆಯ ಕುಕವಿ ಮಾರನ
ಭಾಳಲೋಚನನೆನಿಸಿ ಕವಿನರ
ಪಾಳ ಬಿರುದಿನ ಪುರುಷ ಸರಸತಿ ಪೆಸರಿನವ ನಾನು[4] ||೩||

ಹಾಳು ಕರ್ಣಾಟಕದ ಸ-ಣ ಬಿರು
ಗಾಳಿ ಬೀಸಿತು [5]ನಾಡ ಮುಸುಕಿತು
ಧೂಳು ರೂಪಿನ ಕರಣವಟನಗಳಕಗಳದರಿದರ[5] |
ಬಾಳು ಮುನ್ನಂತಾಗಲೆಂದಾಂ
ಕೇಳಿರುವ [6]ಕರ್ಣಾಟಕವನಿದೊ
ಪೇಳಲುದ್ಯೋಗಿಸಿದೆನೀ ಶತಕಾರ್ಥಷಟ್ಪದವ ||೪||

ಹತ್ತು ವತ್ಸರಕೊಂದು ಪಂಕ್ತಿಯ
ಕೆತ್ತಿ ಮೇಣ್ ಗಡ ಗಳ ವಲಂಗಳ
ಮೆತ್ತಿ ಮಾಡುವ ಸುತ್ತು ಬಳಸಿನ ಧುತ್ತ[7] ನಾನಲ್ಲ |
ಮುತ್ತುಮಾತಿನ ಬಿಡುರಸದ ಸವಿ
ದುತ್ತು ಭಾವಿಸೆ ತಾನೆ ಸತ್ವದ
ಬಿತ್ತು ವಾಣಿಗೆ ಸತ್ತು ಸನ್ನೈವತ್ತು ಷಟ್ಪದವು ||೫||

---

[1] ಪ್ರಾಸ ಅಲಂಕಾರ ವ್ಯಾಕರಣ ರಹಿತರಾದವರು.

[2] ಕಾವ್ಯರಚನೆಯಿಂದ ದ್ರವ್ಯಸಂಪಾದನೆಯಾಗುವುದಿಲ್ಲವೆಂದು ಗೋಳಾಡುವವರು.

[3] ಕೋಳಿಯು ''ಕೊ-ಕ್ಕೊ-ಕ್ಕೋ'' ಎಂದು ಕೂಗಿದ್ದನ್ನೇ ಕೂಗುವಂತೆ 'ಹಾಡಿದ್ದೆ ಹಾಡೊ ಕಿಸುಬಾಯ್ದಾಸ'' ಮಾಡುವವರು.

[4] 'ಅಚ್ಚಿದ ಪ್ರತಿ'ಯ ಪಾಠಾಂತರ:

ಭಾಳಲೋಚನನಂತೆ ಕುಕವಿ ಕ |
ಪಾಳವನು ಹಿಡಿದದರಲೇ ಗೋ |
ಪಾಳಫೆತ್ತುವ ಪುರುಷ ಸರಸತಿ ಪೆಸರಿನವ ನಾನು ||

[5] ಅನ್ವಯ: ''ಕರಣ ಅಟನಗಳ ಅಕಗಳ ಅದರ ಇದರ ರೂಪಿನ ಧೂಳು ನಾಡ ಮುಸುಕಿತು.''

[6] ವೈಶಂಪಾಯನನಿಂದಲೋ ವಿದುರನಿಂದಲೋ ಸಂಜಯನಿಂದಲೋ ಕೇಳಿರುವ.

[7] 'ಧೂರ್ತ'ದ ತದ್ಭವ.

ಮುಂಜಿಯೂಟಕೆ ಬಂದು ಮಕ್ಕಳ
ಬಂಜೆ ಕಂಡಂದದಲಿ ಬೆಳಗಿನ
ಸಂಜೆವರಮುಂಡುಂಡು ಕಡೆಗಾ ಮಜ್ಜಿಗನ್ನದಲಿ |
ಗಂಜಿಯಿತ್ತೆಂದೆಂಬ ಸಹಿಸದ
ನಂಜುನಾಲಗೆಯಾತ ಕಬ್ಬದ
ಬಿಂಜವಿದ ತಾ ಮೆಚ್ಚನೆನಲಾಸಂಜಿ ನಿಲಿಸುವೆಸೆ ||೬||

ಏನನಾರಾಡಿದಡೆ[1] ನನಗೇ
ನೂನವಿಲ್ಲ ವಿಚಾರಿಸಲು ಮತಿ
ಹೀನರೆಲ್ಲರ ಮರುಳುಮಾತುಗಳಾರ ನಿಲಿಸುವುವು |
ಧೇನು ಕರೆಯದೆ ಹಾಲ ಹುಟ್ಟಿಯು
ಜೇನು ಕಟ್ಟದೆ ನೆಯ್ಯ ಸೊಬಗಿನ
ಸೋನೆ ಸುರಿಯದೆ ನಿಲುಗುಮೇನವರಿವರ ಬಿರುನುಡಿಗೆ ||೭||

ಓದುವವರೋದುವರು ಸಹಿಸದೆ
ಸೀದು ಸಿಡಿಮಿಡಿಗೊಂಡು ನಡುವಣ
ಬೀದಿಯಲಿ ಬೈದಿಡುವವರು ಬೈದಾಡುವರು ಬಿಡೆಲಾ |
[2]ವೇದನಾಲ್ಕರ ಪಿರಿಯ ಬೊಮ್ಮನ
ಮೇದಿನಿಯ ಮೇಲೆತ್ತಿದವನನ
ನಾದಿಮೂರುತಿ ಶಿವನ ನೆನೆಯುತೆ ನುಡಿಯ ತೊಡಗುವೆನು ||೮||

---

[1] 'ಅಟ್ಟದ ಪ್ರತಿ'ಯ ಪಾಠಾಂತರ—"ಏನನಾರೇಳಿದಡೆ."

ಇಲ್ಲಿರುವ ಅನ್ವಯ ಪಲ್ಲಟವನ್ನು ಸರಿಪಡಿಸಿಕೊಂಡರೆ, ಈ 'ಏನನಾರೇಳಿದಡೆ' ಎಂಬುದು 'ಆರನೇನೇಳಿದಡೆ' ಎಂದಾಗುವುದು.

ಇದನ್ನು ಪದಚ್ಛೇದ ಮಾಡಿದರೆ—'ಆರನೇ + ನು + ಏಳಿದಡೆ' ಎಂದಾಗುವುದು. ಅನ್ವಯ ಕ್ರಮವಾಗಿ ಅರ್ಥಮಾಡಿದರೆ—ಆರನೇ = ಆರನ್ನೇ, ನು = ಅವನು (ಅವಳು ಅಲ್ಲ), ಏಳಿದಡೆ = ಏಳೆಂದು ಭಾವಿಸಿದರೆ—ಅರ್ಥಾತ್ ವಿಮರ್ಶಕನು ಆರನ್ನೇ ಏಳೆಂದು ಭಾವಿಸಿದರೆ; ಎಂದರೆ, ಸತ್ಕಾವ್ಯವಾದ ಇದನ್ನು ಅಸತ್ಕಾವ್ಯವೆಂದು ವಿಮರ್ಶಕನು ಭಾವಿಸಿದರೆ ನನಗೇನೂ ಊನವಿಲ್ಲ ಎಂದು ಮುಖ್ಯತಾತ್ಪರ್ಯವು ಹಾಗೂ ಭಾವಾರ್ಥವು.

[2] ಕವಿಯು ಸಂಪ್ರದಾಯದಂತೆ ತ್ರಿಮೂರ್ತಿಗಳನ್ನು ನೆನೆಯುವನು.

## ಕರ್ಣಾಟಕ ಸ್ತವನವು[1]

### ಎಂಬ ಎರಡನೆಯ ಗತಿಯು

ತುದಿಯ ಕಕಾರದ
ಬದಿಯಲಿ ಣಾವನು
ಚೆದುರದಿ ಮೇಣ್ ಅರ್ಕಾವೊತ್ತ
ಪೊದೆದು ಟ ಕ ಗಳಿಂ
ದೆದೆಗೊಳಿಸುವುದರ
ಪದವ ಪಿಡಿವೆ ಕ-ಣಾ-ರ್-ಟ-ಕ-ದಾ ||೯||

[2]'ಗ' ವೆ ಮೊದಲು ಗಣಪತಿಗೆ
'ಸ' ವೆ ಮೊದಲು ಸರಸತಿಗೆ
'ಹ' ವೆ ಮೊದಲು ಹರಿಹರರ ಬಲ್ಜೋಡಿಗೆ |
'ಉ' ವೆ ಮೂಲವ್ ಉಳಿದವರಿಗ್
'ಎ' ವೆ ಮೂಲವ್ ಎಲ್ಲರಿಗೆ
'ಕ' ವೆ ಮೂಲ ಕರ್ಣಾಟಕಕ್ಕೆ ಅಲ್ತೇ[2] ||೧೦||

---

[1] ಕವಿಯು ಪ್ರಾರಂಭದ ಎರಡನೆಯ ಪದ್ಯದಲ್ಲಿ ಹೇಳಿಕೊಂಡಂತೆ ಇಂತಹ ಅಪೂರ್ವವಾದ ಸ್ತವನಗೈದಿರುವವನು ಇವನೊಬ್ಬನೇ. ಅದರಲ್ಲೂ ಮೊದಲ ಷಟ್ಪದಿಯಲ್ಲಿ ಕರ್ಣಾಟಕ ಮಾತೆಯನ್ನು ವರ್ಣಿಸಿ, ಉಳಿದ ಐದರಲ್ಲಿ "ಕ-ರ್-ಣಾ-ಟ-ಕ"ದ ಪಂಚಾಂಗಗಳ ಮಹಿಮೆಯನ್ನು ಹಾಡಿದವನೆಂದರೆ ಈ ಪುರುಷ ಸರಸ್ವತಿಯೊಬ್ಬನೆ. ಇವನಂಥವರು ಇನ್ನಿಲ್ಲ. ಅಲ್ಲದೆ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕವೆಂಬ ಆರು ಷಟ್ಪದಿಗಳಿಂದ ಈ ರೀತಿಯ ಗತಿಗೆ ಕಾರಣನಾದವನು ಇವನೊಬ್ಬನೇ.

[2] ಈ ಪದ್ಯದ ಮೊದಲ ಪಂಕ್ತಿಯಲ್ಲಿ ಕವಿಯು ವಿಘ್ನೇಶ್ವರನನ್ನೂ ಎರಡನೆಯದರಲ್ಲಿ ವಿದ್ಯಾಭಿಮಾನಿ ದೇವತೆಯನ್ನೂ ಮೂರನೆಯದರಲ್ಲಿ ಹರಿಹರರ ದ್ವೈತಾದ್ವೈತವನ್ನೂ ನಾಲ್ಕನೆಯದರಲ್ಲಿ ಉಳಿದವರನ್ನೂ ಐದನೆಯದರಲ್ಲಿ ಎಲ್ಲರನ್ನೂ ಸ್ಮರಿಸಿ, ಆ ಆ ಪಂಕ್ತಿಗಳಲ್ಲಿ ಸ್ಮರಿಸಿದವರ ಹೆಸರಿನ ಆದ್ಯಕ್ಷರಗಳನ್ನು ಆ ಆ ಪಂಕ್ತಿಗಳ ಆದಿಯಲ್ಲಿ ಇಡುತ್ತ ಬಂದಿರುವ ಈ ಅಪೂರ್ವ ಚಮತ್ಕಾರವು "ಆದ್ಯಕ್ಷರನ್ಯಾಸಾಲಂಕಾರ"ವೆಂಬ ಹೆಸರಿನಿಂದ ಪ್ರಸಿದ್ಧವಾಗಬೇಕಾಗಿದೆ. (ಈ ಕವಿಯು ಇಂತಹ ಅಲಂಕಾರಗಳಿಗೆ ಎತ್ತಿದ ಕೈ. ಇವನ ಇತರ ಅಲಂಕಾರಗಳು—ರಾಸಭಲಾಂಗೂಲಾಲಂಕಾರ, ರಜಕರಹಸ್ಯಾಲಂಕಾರ, ವ್ಯರ್ಥಾಲಂಕಾರ, ತಾಲೀಬುಲಾಕನ್ಯಾಯಾಲಂಕಾರ, ಸತಿಪತಿ ಸಮಾನಸ್ಥಾನಾಲಂಕಾರ, ಸಂದೇಹ ಸಂದೋಹ ಸಂದೇಶಾಲಂಕಾರ, ಇತ್ಯಾದಿ, ಇತ್ಯಾದಿ.)

[1]ಪರುಷ ರೇಫೆ ನತ್ವ ಮುಟ್ಟಿ
ಹರುಷದಿಂದ ಣತ್ವವಾಯ್ತು
ಕರುಣಿಯೋತು ಪೇಳ್ದನಲ್ತೆ ತಾತ ಪಾಣಿನಿ।
ಮರೆತು ಮುತ್ತಿನಂಥ ಮಾತ
ನರರೆ ನತ್ವವನ್ನು ಬಳಸಿ
ನರರು ಪಾಪಿ ಮನುಜರಯ್ಯೋ ಪೋಪರೆಲ್ಲಿಗೆ[1] ||೧೧||

[2]ತರುಣನಾಗಲಿ ಣತ್ವ ತಪ್ಪದು
ತರುಣಿಯಾಗಲಿ ಣತ್ವ ತಪ್ಪದು
ಅರರೆ ಕೇಳಿರೊ ಉರಿವ ಬೆರಣಿಗು ಣತ್ವ ತಪ್ಪದಲಾ।
ಹರಣಗಾವ ಗುರಾಣಿ ಹರಣೀ
ಶ್ವರಿಯ ಹರಣದ ಹರಣದಲಿ ಣಾ
ಮರುಳು ಮಾನವ ಣತ್ವವೇ ಸರ್ವತ್ರಸಾಧನವು[2] ||೧೨||

ಅಕ್ಕರಗಳಲಿ 'ಟ' ವೆಂಬುದೆ ಮುಖ್ಯವು
ನಿಕ್ಕುವಮಿದುವೇ ದಿಟ ಸಟೆಯಲ್ತೆಂ
ತಕ್ಕುಮಿದಿಲ್ಲದೆ ಆಟವು ಊಟವು ಬೇಟವು ಕೂಟವು ತಾವ್[3]।
ತಕ್ಕುದುವದೆ ಕಾರಣದಿಂದೆ 'ಟ' ಯೆಂ
ಬಕ್ಕರಸಾಲಿನ ಕಡೆಯ ಹಿರಿ 'ಣ'ವ
ನ್ನುಕ್ಕಿಸುವುದು ಕರ್ಣಾಟಕ ರೂಪಿಸಲದುವೇ ಸಭ್ಯತೆಯು[3] ||೧೩||

---

[1] ಇಲ್ಲಿ ಕವಿಯು, ''ರಷಾಭ್ಯಾಂ ನೋ ಣಃ ಸಮಾನಪದೇ'' ಎಂಬ ಪಾಣಿನಿಯ ಪವಿತ್ರ ಸೂತ್ರವನ್ನು ಪರಮಪಾಮರರಿಗೂ ಅರ್ಥವಾಗುವಂತೆ ಹೃದಯಂಗಮವಾಗಿ ತಿಳಿಸಿರುವನು. ರೇಫೆಯೆಂಬ ಸ್ಪರ್ಶಮಣಿಯ ಸೋಕಿನಿಂದ ನಕಾರವೆಂಬ ಸಾಮಾನ್ಯಲೋಹವು ಹೇಗೆ ಣಕಾರವೆಂಬ ಚಿನ್ನವಾಗುವುದೆಂಬ ರಹಸ್ಯಕ್ಕೆ ಮನಸೋಲದಿದ್ದರೂ, ಆರನೆಯ ಪಂಕ್ತಿಯ ''ಅಯ್ಯೋ'' ಎಂಬ ಹೃದಯ ವಿದ್ರಾವಕವಾದ ಕೂಗನ್ನು ಕೇಳಿಯಾದರೂ ನಕಾರವಾದಿಗಳು ತಮ್ಮ ''ವಿಶೃಂಖಲ ಪ್ರವೃತ್ತಿ''ಯನ್ನು ತೊರೆದು ಭೂತದಯೆ ಪಶ್ಚಾತ್ತಾಪಗಳನ್ನು ಮೆರೆದು ಣಕಾರವಾದಿಗಳಾಗುವರೆಂದು ಕವಿಯ ಹಂಬಲ.

[2] ''ಸರ್ವಂ ಣತ್ವಮಯಂ ಜಗತ್'' ಎಂಬುದನ್ನು ಕವಿ ಇಲ್ಲಿ ತನ್ನದೇ ತನ್ನದಾದ ರೀತಿಯಲ್ಲಿ ಸ್ಪಷ್ಟಗೊಳಿಸಿದ್ದಾನೆ.

[3] ಆಹಾ, ಅಲ್ಲವೆ!

ಬಾಲ ಹೋದರು ಕೊಂಬು ಬಸವಗಿರಬೇಕಯ್ಯ
ಕಾಲು ಹೋದರು ನಡುವು ನೆಟ್ಟಗಿರಲೇ ಬೇಕು
ನಾಲಗೆಗಳಿಲ್ಲದಿದ್ದರು ಜೇಡ ಹಾವುಗಳ್ಗಿರಬೇಕು ವಿಷದ ಹಲ್ಲು |
ಮೇಲು ಕೀಳಾದರೆಯು ಕೀಳು ಮೇಲಾದರೆಯು
ಕಾಲು ತಲೆಯಾದರೆಯು ತಲೆಯು ಕಾಲಾದರೆಯು
ಪಾಲಿಸಲೆ ಬೇಕು ಣತ್ವವ ಕಡೆಯ ಕತ್ವದಿಂದೇನೀಗ [1]ಕತ್ತೆಬಾಲ[1] ||೧೪||

**ಣಾಕ ವ್ಯಾವರ್ಣನವು**

ಎಂಬ ಮೂರನೆಯ ಗತಿಯು

ಶ್ರೀರಮಣ ಗಿರಿಜಾಮನೋಹರ
ವಾರಿಜೋದ್ಭವರೊಲಿದು ಸಲಹುವ
ಧಾರಿಣಿಯಿದೀಯಿದರ ಮೇಲಿನ ಸಾಲುಸಗ್ಗಗಳು |
[2]ಮೂರರೆಪ್ಪತ್ತೇಳರರುವ
ತ್ತಾರರೈವತ್ತೈದರೊಂಬತು
ನೂರರೆಣಿಕೆ[2]ಯೊಳೆಸೆಯುತಿರ್ಪುವು ಪೇಳಲಸದಳವು ||೧೫||

ಮಿಂಚಿದಪಶಬ್ದಾಕ್ಷರಗಳನೆ
ಹೊಂಚಿ ಹಿಡಿಹಿಡಿದದರ ಕತ್ತ ಕಿ
ವುಂಚಿ ಲೋಕಕೆ ಸತ್ತ ಹೆಣಸದ ಸುಟ್ಟೆ ತೋರುತ್ತೆ |
ಕಿಂಚಿದೀಷದ್ದೋಷವಿರೆ ನಿ
ರ್ವಂಚನೆಯೊಳದ ಖಂಡಿಸುತೆ ರೋ
ಮಾಂಚವಡೆವರು ಪಡೆವರಾ ಸಗ್ಗಗಳಲೊಂದೊಂದ ||೧೬||

---

[1] ಇದನ್ನು ಪಾಮರರು "ಅನ್ನೆಸೆಸರಿ ಅಪೆಂಡೇಜಲಂಕಾರ" ಎನ್ನುವರು. ಸಂಪ್ರದಾಯದಲ್ಲಿ ಇದಕ್ಕೆ "ರಾಸಭಲಾಂಗೂಲಾಲಂಕಾರ" ಅಥವಾ "ರಜಕರಹಸ್ಯಾಲಂಕಾರ" ಎಂದು ಹೆಸರು. 'ರಾಸಭ' ಎಂದರೆ ಕತ್ತೆಗೆ, 'ಲಾಂಗೂಲ' ಎಂದರೆ ಬಾಲವು ಇದ್ದರೆ ಎಷ್ಟು ಭಾರ ಹೊರಬಲ್ಲುದೋ ಇಲ್ಲದಿದ್ದರೂ ಅಷ್ಟೇ ಭಾರ ಹೊರಬಲ್ಲುದು—ಎಂಬ 'ರಹಸ್ಯ' ಎಂದರೆ ಗುಟ್ಟನ್ನು, 'ರಜಕ' ಎಂದರೆ ಅಗಸನು ಹೇಗೆ ಬಲ್ಲನೋ ಹಾಗೆ ಕಸಹಿತವಾದ 'ಕರ್ಣಾಟಕ'ಕ್ಕೆ ಎಷ್ಟು ಗೌರವ ಮರ್ಯಾದೆಗಳುಂಟೋ ಕರಹಿತವಾದ 'ಕರ್ಣಾಟ'ಕ್ಕೂ ಅಷ್ಟೇ ಉಂಟೆಂಬುದನ್ನು ಈ ಮೂಲಕ ಕವಿ ತಿಳಿಸಿದ್ದಾನೆ.

[2] $3 \times 77 \times 66 \times 55 \times 900 = 75,46,77,000$.

ಅನಿತರೊಳಗುತ್ತಮವು ಣಾಕವು
ವಿನುತ ಕರ್ಣಾಟಕದ ಣತ್ವವ
ನೆನಿತೊ ಸಾಹಸದಿಂದೆ ಸಲಹುವ ಣರರ ನಿಲುದಾಣ।
ಮನುಮಥನ ಸಿರಿರೂಪ [1]ನರವಾ
ಹನನ ಮಹದೈಶ್ವರಿಯ[1] ನೆರೆ ವಾ
ಮನನ ವಿಕ್ರಮವೆಲ್ಲವಾಯೆಡೆ ಣತ್ವ ಭಕ್ತರಿಗೆ ||೧೭||

ಣರರು ಣಾಕಾರಾಂಗ ಸುರಸುಂ
ದರರು ಕೈ ಕಾಲ್ ಮೂಗು ಕಣ್ ಕಿವಿ
ಸಿರಿಮೊಗವು ಮರಿಮೀಸೆ ಮೈಮನಸುಸಿರುಗಳೆಲ್ಲ।
ಸರುವ ಣತ್ವಪ್ರಸರವೇ ಮೈ
ವೆರೆದ ಣಾಕದ ಣತ್ವಪರಮೇ
ಶ್ವರರ ವಿಭವವ ಪೊಗಳಲಸದಳವಾದಿಶೇಷನಿಗು ||೧೮||

ಣತ್ವಮಣಿಪೀಠದಲಿ ಮಂಡಿಸಿ
ಣತ್ವಪರ್ಯಂಕದಲಿ ನಿದ್ರಿಸಿ
ಣತ್ವಜಲದಲಿ ಮಿಂದು ಣತ್ವಾಭರಣಗಳ ಧರಿಸಿ।
ಣತ್ವಪಾನಾನ್ನಗಳ ಸೇವಿಪ
ಣತ್ವಸುಖದ ಮಹತ್ವವದನಾ
ಣತ್ವವೇತ್ತರೆ ಬಲ್ಲರಲ್ಲದೆಯೆಲ್ಲರಿಗೆ ಮೊಗ್ಗೇ ||೧೯||




ಅದುವೆ ಕತದಿಂದೆನ್ನವೊಲು ನೀ
ನಿದಿರುಗೊಂಡು ನಕಾರವಾದಿಗ
ಳೆದೆಯುನಪಹರಿಸಿರುವ ಕರ್ನಾಟಕದ ನತ್ವವನು।
ಕೆದಕಿ ತೊಲಗಿಸಿ ಣವನೆ ನಿಲಿಸಲು
ಪದುಳವಪ್ಪುದು ಕಂದ ಕೇಳೈ
ಕದಲದನುಕರಿಸುವುದು ಣತ್ವೋದ್ಯೋಗ ದಾಯಿಗರ ||೨೦||

---

[1] ಕುಬೇರನು ನಯುತನಾದ 'ನರ'ನನ್ನು 'ವಾಹನ'ಮಾಡಿಕೊಂಡವನಾದುದರಿಂದ, ಅವನಂತೆಯೆ ನಕಾರವಾದಿಗಳನ್ನು ಕೆಳಗಿಕ್ಕಿದ ಣಕಾರವಾದಿಗಳಿಗೂ ನರವಾಹನನ ಮಹದೈಶ್ವರ್ಯ ಬರುವುದರಲ್ಲಿ ಸೋಜಿಗವೇನಿದೆ? (ಇದೇ ಸಂದರ್ಭದಲ್ಲಿ, ನರ-ಣರ, ನಾಕ-ಣಾಕ ಎಂಬ ರೂಪಗಳೊಡನೆ 'ಮೀಸೆ-ಮೀಶೆ-ಮೀಷೆ' ಎಂಬ ಅವಸ್ಥಾತ್ರಯಗಳ ನಾಮಾಂತರಗಳನ್ನೂ ಗಮನಿಸಿರಿ.)

## ಣತ್ವ ಪ್ರಾಚೀನತಾಖ್ಯಾನವು

### ಎಂಬ ನಾಲ್ಕನೆಯ ಗತಿಯು

[1]ರೂಪ ಕರ್ಣ್ನಾಟಕವೆ ಮೊದಲು ಸು
ರೂಪ ಕರ್ಣ್ಣಾಟಕವೆ ಬಳಿಕಲು
ರೂಪ ಕರ್ಣಾಟಕವೆ ಬಳಿಕೆಯು ರೂಪಗಳ ರೂಪ|
ಭಾವು ಕರ್ಣಾಟಾಂಶ ಣತ್ವವ
ಕಾಪಿಡಲು ಪರಮಾತ್ಮ ನೊಲಿವನು
ಪಾಪಮಯ ಕರ್ನಾಟಕವ ತೆಗೆ ತಕ್ಕು ಸೂಕತ್ತ ||೨೧||

ಣತ್ವಯುತ ಕರ್ಣಾಟಕವ ತಾ
ವೊತ್ತರಿಸಿ ನಾವುಗಳು ಬಳಸದ
ನತ್ವಯುತ ಕರ್ನಾಟಕವ ಹಿಡಿದೆತ್ತಿ ರೂಢಿಸುವ|
ಕುತ್ತವಿದ ಕುಡಿಯಲ್ಲೆ ಕಡಿದು ಮ
ಹತ್ವವೆಮ್ಮದನೆತ್ತಿ ಬೆಳೆಸುವ
ಣತ್ವಶೂರರು ನಾವು ನಮ್ಮದು ನತ್ವವಲ್ಲೆಂದ ||೨೨||

*ಅರಿಯದವನೇ ವ್ಯಾಸ ಪಂಪನು
ಕುರಿಯೆ ವಿನುತ ಕಥಾಸರಿತ್ಸಾ
ಗರದ ಕರ್ತನು ಮೇಣ್ ಬೃಹತ್ಸಂಹಿತೆಯ ಬರೆದವನು|
ಮುರುಳರೇ ಏನ್ನಾಗವರ್ಮರು
ಇರುವರೊಡನಾ ನಾಗಚಂದ್ರನು
ಕುರುಡುಕನಡೆಗು ಕೀಳೆ ಪೇಳಾ ಭಾಗವತದಲ್ಲಿ ||೨೩||

---

[1] ಶಾಸನಗಳಲ್ಲಿ ಕರ್ಣ್ನಾಟಕ, ಕರ್ಣ್ಣಾಟಕ, ಕರ್ಣಾಟಕ ಎಂಬ ಮೂರೂ ರೂಪಗಳು ಕಂಡುಬರುತ್ತವೆ, ತಾನೆ. ಇದನ್ನು ಪುಷ್ಟೀಕರಿಸಿ, ಹಾಗೂ ವಿವರಿಸಿ "ಕರ್ಣನಾಟಕ"ವೆಂಬ ಮೂಲರೂಪವು ಹೇಗೆ "ಕರ್ಣ್ನಾಟಕ"ವಾಯಿತೆಂದೂ, ಅದು ಕಾಲಕ್ರಮೇಣ ಹೇಗೆ "ಕರ್ಣ್ಣಾಟಕ", "ಕರ್ಣಾಟಕ" ರೂಪಗಳಿಗೆ ಬದಲಾಯಿತೆಂದು ಮುಂದಣ ಗತಿಯಲ್ಲಿ ವಿಸ್ತರಿಸಿ, "ಕರ್ನಾಟಕ"ವನ್ನು ಬಳಸಬಾರದೆಂದು ಎಚ್ಚರಿಸುತ್ತಾನೆ.

* ಪದ್ಯಗಳು 23, 24 ಮತ್ತು 25ರ ಪೂರ್ವಾರ್ಧಗಳಲ್ಲಿ ಕವಿಯು ಟವರ್ಗ ಪಂಚಮಾಕ್ಷರ ಘಟಿತವೂ ಮೂರ್ಧನ್ಯಣಕಾರಸಹಿತವೂ ಆದ 'ಕರ್ಣಾಟಕ'ದ ವಿಶ್ವರೂಪದರ್ಶನವನ್ನು ದಯಪಾಲಿಸುವ ಅಚ್ಚಾದ ಗ್ರಂಥಗಳನ್ನು ಉಲ್ಲೇಖಿಸಿದ್ದಾನೆ.

ಭವ್ಯ ಣತ್ವಸಯುಕ್ತ ರೂಪವು
ದಿವ್ಯ ಮಾರ್ಕಂಡೇಯ ಚರಿತದ
ಲವ್ಯಯದ ನವ ದುರುಗಸಿಂಹನ ಕೇಶಿರಾಜರಲಿ |
ಕಾವ್ಯಮೀಮಾಂಸೆಯ ರಚಿಸಿ ಸಂ
ಭಾವ್ಯನಾಗುತೆ ಸಕಲ ಬುಧಜನ
ಸೇವ್ಯವೆನಿಸಿದಖಂಡ ನಾಟಕ ನಾಟಿಕೆಗಳೆರಡ ||೨೪||

ರಚಿಸಿದಾ ವರ ರಾಜಶೇಖರ
ವಚನನಿಚಯದೆ ಕಾಣಲಾಗುವು
ದುಚಿತವೆನಿಸಿಹ ಣಯುತ ಕರ್ಣಾಟಕದ ಮೂರ್ತಿಗಳ |
[1]ಶುಚಿ ಸದಾಚಾರಿಗಳ ಬಳಕೆಯು
ಖಚಿತ ಪದರೂಪುಗಳ ಕೆಡಿಸಲು
ಪಚನವಪ್ಪುದೆ ಗೈದ ದುಷ್ಕೃತ ದೇವರೊಲಿಯುವನೆ[1] ||೨೫||

ಹಿಂದಣಾ ಪುಸ್ತಕಗಳೆಲ್ಲೆ
ಲ್ಲಿಂದಲೋ[2] ಅಚ್ಚಾಗಿ ಹೊರಬಿ
ದ್ದಿಂದಿಗೂ ಅಚ್ಚಳಿಯದಿವೆ[3] ಸಂದೇಹ ಮೂಡಿದರೆ |
ಕುಂದದೆಯೆ ಕರ್ಣಾಟ ರೂಪೊಂ
ದೊಂದು ಪುಟದಲು ರಾಜಿಸುತ್ತಿಹು
[4]ದೊಂದೆ ಸಾಕ್ಷಿಯು ಸಾಲದೇ ಪಲವೆನಿತರಿಂದೇನು[4] ||೨೬||

---

[1] ಅಚ್ಚು ಕೆಲಸ ಮುಗಿದನಂತರ ಸೋಪು ಹಾಕಿ ಕೈಗಳನ್ನು "ಶುಚಿ"ಮಾಡಿಕೊಳ್ಳುವ "ಸದಾಚಾರ"ವುಳ್ಳವರು "ಬಳಸಿ", ಯಂತ್ರದಲ್ಲಿ ಕಳಚಿಬೀಳದಂತೆ "ಖಚಿತ"ವಾಗಿ ನಿಲ್ಲಿಸಿದ ಪದರೂಪಗಳನ್ನು ಕೆಡಿಸಿದರೆ, ಮಾಡಿದ ಪಾಪ ಅರಗುತ್ತದೆಯೆ? ಅರಗುವುದಿಲ್ಲ; ದೇವರು ಒಲಿಯುವನೆ? ಒಲಿಯುವುದಿಲ್ಲ—ಎಂದು ಭಾವ.

[2] ಎಲ್ಲೆಲ್ಲಿಂದ ಎಂದು ಹೇಳುವುದು ಕಷ್ಟವೆಂದರ್ಥ; ಬೆಂಗಳೂರು, ಮೈಸೂರು, ಮದರಾಸು, ಬೊಂಬಾಯಿ, ಕಲ್ಕತ್ತ, ಇಂಗ್ಲೆಂಡು, ಜರ್ಮನಿ, ಅಮೆರಿಕ ಇತ್ಯಾದಿ.

[3] ಅಚ್ಚು ಮೊಳೆಯ ಅಚ್ಚು ಹಾಳಾಗದೆ.

[4] ಇದಕ್ಕೆ "ತಾಲೀಬುಲಾಕುನ್ಯಾಯಾಲಂಕಾರ"ವೆಂದು ಹೆಸರು. ಬುಲಾಕು ಎಂಬ ಒಂದೇ ಸಾಕ್ಷಿಯು ಇದ್ದರೆ, ವ್ಯಕ್ತಿಯೊಂದನ್ನು ಹೆಂಗಸೆಂದು ತಿಳಿಯಲು ಬೇರೆ ಸಾಕ್ಷಿಗಳು ಹೇಗೆ ಬೇಕಿಲ್ಲವೋ; ತಾಲಿಯೆಂಬ ಒಂದೆ ಸಾಕ್ಷಿಯಿದ್ದರೆ, ಆ ಹೆಂಗುಸಿಗೆ ಮದುವೆಯಾಗಿರುವುದನ್ನು ತಿಳಿಯಲು ಹೇಗೆ ಬೇರೆ ಸಾಕ್ಷಿಗಳು ಬೇಕಿಲ್ಲವೋ ಹಾಗೆಯೇ ಇಲ್ಲಿಯೂ ಎಂದು ಗ್ರಹಿಸಬೇಕು.

ಅದ್ರಿಗಳ ತೆರದಿಂದಲೊಪ್ಪುವ
ಮುದ್ರಿಸಿದ ಪುಸ್ತಕದ ರಾಶಿಯು
ನಿದ್ರಿಸದೆ ಕಣ್ಣೊಳಗೆ ಕೈಯೆಣ್ಣೆಯಸು ಹಚ್ಚಿರಿಸಿ |
ಶುದ್ಧದೃಷ್ಟಿ ವಿಶುದ್ಧ ಮನಸಿನೊ
ಳೆದ್ದು ಪರಿಕಿಸಲುದ್ದ ಣತ್ವ ನಿ .
ಬದ್ಧ ಕರ್ಣಾಟಕವೆ ಕಂಗೊಳಿಸುವುದು ಕೇಳೆಂದ ||೨೭||

ಏತಕೀ ಮರುಳಾಟವೆಲೆ ನಿನ
ಗೋತು ಪೇಳುವೆನಿಂತು ಕರುಣದಿ
ಪಾತಕವು ಸತ್ವ ಪ್ರಯೋಗವು ಬೇಡ ಬೇಡೆಲವೊ |
ಸೋತು ತಪಿಸಿ ವಿನೀತನಹ ಪಾ
ಪಾತುಮನ ಪೊರೆವಾ ಣಕಾರವು
ಸೇತುವೆಯು ತಾಸಿಹಪರಗಳಿಗೆ ಮುಕ್ತಿಮಾರ್ಗದಲಿ ||೨೮||

ಜಂಭವಾತಲ್ಲಿದು ವೃಥಾ ಸಂ
ರಂಭಗೆಯ್ವುದಕೋಸುಗ ಪ್ರಾ
ರಂಭಿಸಿದುದಲ್ಲೆನಗೆ ಕಿವಿಗುಡು ಪೇಳ್ವೆನರೆವಾತ |
ಕುಂಭಿಯಂತೆಯೆ ಕೂಗಿ ಬರಿದೆ ವಿ
ಜೃಂಭಿಸಿದನಿವನೆನ್ನದಿರು ನೆರೆ
ಶಂಭು[1] ನಿನಗೊಲಿಯುವನು ಣತ್ವಕೆ ಶರಣು ಶರಣೆನಲು ||೨೯||

---

[1] ಇಲ್ಲಿ ಈ "ಶಂಭು" ಎಂಬುದು ಸಾಮಾನ್ಯವಾಗಿ ಪ್ರಚಾರವಾಗಿರುವಂತೆ ಕೇವಲ ಶಿವನೆಂಬ ಅರ್ಥದಲ್ಲಿಲ್ಲ.

ಮೊದಲ "ಶ"ಕಾರದಿಂದ ಶರ್ವಾಣೀರಮಣನಾಗಿ ಶಂಕರನಾದ ಪರಶಿವನನ್ನೂ ;

ಅನಂತರದ ಬ್ರಹ್ಮಾಂಡದಂತಿರುವ ಅನುಸ್ವಾರದಿಂದ—ತದಂಡಕ್ಕೆ ಚರಣಾಯುಧಸ್ವರೂಪನಾದ ಸಾಕ್ಷಾತ್ ಹಿರಣ್ಯಗರ್ಭ ಪರಬ್ರಹ್ಮನನ್ನೂ ;

ಕಡೆಯ "ಭು"ಕಾರದಿಂದ—ಭುವನ ಮೋಹಕವಾದ ಮೋಹಿನೀ ರೂಪವನ್ನು ತಾಳಿ, ಭೂದೇವಿಯನ್ನು ಉದ್ಧರಿಸಿ ಭೂಭೃತರನ್ನು ಸಂಹರಿಸಿ, ಸ್ವಯಂ"ಭು"ವಾದ ಶ್ರೀಮನ್ನಾರಾಯಣ ಸ್ವಾಮಿಯನ್ನೂ ;

ಈ ಪರಿಯಲ್ಲಿ ತ್ರಿಮೂರ್ತಿಗಳನ್ನೂ ಕವಿಯು ಸ್ಮರಿಸಿದ್ದಾನೆ.

## ಕರ್ಣ್ನಾಟಕ ಸ್ವರೂಪ ವಿವರಣವು

ಎಂಬ ಐದನೆಯ ಗತಿಯು

ತಿಣಿಕುವರು ಫಣಿರಾಯ ರಾಮಾ
ಯಣದ ಗಡಣದಿನಂದು ಸೊಂದಂ
ತೆಣಿಕೆಗೆಟುಕದ ವೀರ ಕರ್ಣಾಟಕದ ಗಂಡುಗಳು |
ನ-ಣ ಪರಾಕ್ರಮಿಗಳೆ ವೃಥಾ ಹಗ
ರಣದ ಕರ್ಣಾಟಕದ ತತ್ವವ
ಗಿಣಿಗೆ ಪೇಳ್ವಂದದಲಿ ಪೇಳುವೆನುಚಿತವಚನದಲಿ ||೩೦||

ಮಾರಪಿತ ಸಿರಿರಮಣ ಸಾರಾ
ಸಾರಸಂಗತ ಸಕಲ ಜಗದು
ದ್ಧಾರಕರ್ತನು ಕಪಟನಾಟಕ ಸೂತ್ರಧಾರಿ ಹರಿ |
ಭಾರತದ ಕದನದಲಿ ಗೀತಾ
ಚಾರಿಯನ ನೆವದಿಂದಲಾ ಜಂ
ಭಾರಿಸೂನುವ ಕೆಣಕಿ ಕರ್ಣನ ಕೊಲಿಸಿದಾ ಅಂದು* ||೩೧||

ಪರಮಪುರುಷೋತ್ತಮನು ಪಾರ್ಥನ
ವರವರೂಥವನೆಸಗುತಾ ತಾ
ಮರಸಮಿತ್ರನ ಮಗನ ತೇರಿನ ಬಲದ ಗಾಲಿಯನು |
ತಿರೆಯು ನುಂಗಿರಲಾಗಳೇ ಮುಂ
ಬರಿದು ಪಾರ್ಥನ ಕರೆದನಂತರ
ಮರಿದು ಕರ್ಣನ ಕೊಲಲು ಬೇಗನೆ ಕಣೆಯ ಬಿಸುಡೆಂದ ||೩೨||

---

* ಟವರ್ಗ ಪಂಚಮಾಕ್ಷರಘಟಿತವಾದ ಕರ್ಣಾಟಕ ಶಬ್ದವು ಮಹಾಭಾರತದಲ್ಲಿ ಮೊಟ್ಟ ಮೊದಲು ಕಂಡುಬರುವುದೆಂಬುದು ಈ ಪುರುಷ ಸರಸ್ವತಿಯ ಕಾವ್ಯದಿಂದಲೂ ಪುಷ್ಟೀಕರಿಸಲ್ಪಡುತ್ತಿರುವುದನ್ನು ಗಮನಿಸಬೇಕು.

[ಮಗ್ಗುಲು ಪುಟದ ೩೩ನೆಯ ಪದ್ಯಕ್ಕೆ ಟಿಪ್ಪಣಿ :—ಭಾರತ ಕದನದಲ್ಲಿ ತನ್ನ ಹೂತಗಾಲಿಯನ್ನು ಕರ್ಣನು ಹೆಗಲುಕೊಟ್ಟು ಮೇಲೆತ್ತುವವರೆಗೆ, ಹೂತಗಾಲಿಯನ್ನು ಹೇಗೆ ಮೇಲೆತ್ತಬೇಕೆಂಬುದು ಲೋಕಕ್ಕೆ ತಿಳಿದಿರಲಿಲ್ಲ; ತಮ್ಮ ಹೂತಗಾಲಿಯನ್ನು ರಥಸಮೇತನಾಗಿ ಅಲ್ಲಲ್ಲೆ ಪರಿತ್ಯಾಗಮಾಡುವುದು ಅದುವರೆಗೆ ವಾಡಿಕೆಯಾಗಿತ್ತು. ಕರ್ಣನು ಅಂದು ಕಲಿಸಿಕೊಟ್ಟ ಈ ''ಭೂಸಕ್ತಚಕ್ರೋದ್ಧರಣ ವಿದ್ಯೆ''ಯನ್ನು ಇಂದಿಗೂ ನಮ್ಮ ಗ್ರಾಮಾಂತರಗಳಲ್ಲಿ ಕಾಣಬಹುದು. ಇದು ಪ್ರಾಚೀನ ಸಂಸ್ಕೃತಿಯ ಅವಶೇಷ.]

ಹೂತ ಬಲಗಾಲಿಯನು ನೆಲನ ಸ
ಮೇತ ಸೆಳೆದೆಳೆವನಮು ಸತ್ಪ್ರೋ
ಪೇತ ರವಿಜನು ಚಕ್ರಕೆಡಹೆಗಲಿಕ್ಕುವುದ ಕಂಡು |
ಗೀತೆಗೊಡೆಯನ ನುಡಿಗಳಿಗೆ ಮನ
ಸೋತ ನರನಿಸುಗಣೆಯು ಕರ್ಣನ
ನಾತುಕೊಂಡೊಯ್ಬೆದಿತೊಡನಾ ರಥರಥಾಂಗಗಳ ||೩೩||

ಕೊಂಡುಹೋಯಿತ್ತಿರದೆ ತಾನಾ
ಖಂಡಲನ ಮಗನೆಸೆದ ಕಣೆಯು
ದ್ದಂಡ ಕರ್ಣರ ಚಕ್ರರಥಗಳ ವಿಂಧ್ಯದಿಂದಾಚೆ |
ಗಂಡುಗಲಿಯದ ಕಂಡುಯೆಚ್ಚತು
ಕೊಂಡು ತಾ ನಿಲಲುಬ್ಬುಗಿಸಲೊರು
ಬಂಡೆ ಸಿಕ್ಕಿತು ನದಿಯು ಗೋದಾವರಿಯ ದಂಡೆಯಲಿ ||೩೪||

ಜಟ್ಟಿಗನು ತಾ ಮಲ್ಲವಿದ್ಯೆಯ
ಪಟ್ಟಿನಲಿ ಕೆಳಗಂಡ ಬಂಡೆಯು
ಮೆಟ್ಟಿ ನಿಂತನು *ವಜ್ರಮುಷ್ಟಿಯ ಕಾಲಹಿಡಿತದಲಿ* |
ದಿಟ್ಟ ದಿವಿಜೋತ್ತಮನ ಮಗನೆಸೆ
ದಿಟ್ಟ ಕಣೆ ರವಿಜಾತನನು ಜಿರು
ಬಿಟ್ಟಿತೇ ತೂಳ್ದೊಯ್ದಿತಾ ಕಾವೇರಿ ಹರಿವನಕ ||೩೫||

ಇಂತು ಗೋದಾವರಿಯಿನೆಡದಡ
ಪಿಂತೆ ಕಾವೇರಿಯಿನ ಬಲದಡ
ಮುಂತೆ ತಾನಾದಿಳೆಯು ತನಗಾಕ್ರಾಂತವಾದುದನು |
ಚಿಂತೆಗೊಳ್ಳದೆ ಕಪಟ ನಾಟಕ
ತಂತುಧಾರನ ಬಿಗುರ್ತ ಕಣೆಯು ನ
ಮಂತು ನೆನೆಯುತೆ 'ಕರ್ಣ ನಾಟಕ'ವೆಂದನಾ ಕರ್ಣ ||೩೬||

---

* ಪುರುಷ ಸರಸ್ವತಿಯ ಪ್ರಕಾರ ಆ ಕಾಲದಲ್ಲಿ ಕೈಮುಷ್ಟಿ, ಕಾಲುಮುಷ್ಟಿ ಎಂದು ಮುಷ್ಟಿಗಳಲ್ಲಿ ಎರಡು ತೆರನಿದ್ದಂತೆ ಕಾಣುತ್ತದೆ. ಹಾಗಾದರೆ, 'ಕಪಿಮುಷ್ಟಿ'ಯೆಂಬುದು ಕೇವಲ ಈಚಿನದಿರಬೇಕು. ಎಂದರೆ—ಮಹಾಭಾರತ ಕಾಲದಲ್ಲಿ ಕಪಿಗಳು ಇದ್ದುವೆ, ಇರಲಿಲ್ಲವೆ? ಇದ್ದರೆ, ಅವುಗಳಿಗೆ ಮುಷ್ಟಿ ಇತ್ತೆ, ಇರಲಿಲ್ಲವೆ? ವಿದ್ವಾಂಸರಿಗೆ ವಿಚಾರಾರ್ಹವಾದ ವಿಷಯವಿದು.

ತನಗೆ ಪಾದಾಕ್ರಾಂತವಾದಾ
ಜನಪದಕೆ ಕರ್ಣ್ಣಾಟಕಾಂಕದ
ಮಿನುಗು ಮುದ್ರೆಯನೊತ್ತಿ ಸಂಧಿಸಿ ಕರ್ಣ ನಾಟಕವ |
ಕೊನೆಯ ಗಳಿಗೆಯೊಳೊಡೆಯ ದುರಿಯೋ
ಧನನ ಕೈಯೆಡೆ ಮಾಡಿ ದಾನದ
ಖನಿಯ [1]ಕರ್ಣ್ಣಾಟಕವ ಕಣ್ಮುಚ್ಚಿದನು[1] ಕಲಿಕರ್ಣ ||೩೭||

ಕತೆಯನಿದನರಿತವರು ಬಲುಬಿರು
ವೆತೆಯನಾಂತು ಮಹೋನ್ನತನ ರವಿ
**ಸುತನ ಕರ್ಣನನವಗೆ ಕೂರ್ಗಣೆ ನಾಟಿ ಸಟ್ಟುದನು** |
[2]ಹಿತಮಿತಾ[2]ಕ್ಷರ ಮೂರರಲಿ ಸಂ
ತತವು [3]ನೆನೆನೆನೆದ[3]ದನೆ ತಾನ್ಮೊ
ಮ್ಮತದೊಳಾತನ ನಾಡಿಗಿಟ್ಟರು ಅದುವೆ ಕರ್ಣ್ಣಾಟ ||೩೮||

ಬಾಯಿ ತಿರುಗದ ಕೆಲರು ಸುಲಭೋ
ಪಾಯ ಚತುರರು ರೂಪಿಗದಕ
ನ್ಯಾಯ ಮಾಡಿಯೆ 'ಣ' ವನೆ ನುಡಿಯಲು ನಕ್ಕೆ ಬದಲಾಗಿ |
ಆಯಿತಾ ಕರ್ಣ್ಣಾಟಕವು ಮೇಲ್
ರಾಯ ಕರ್ಣಾಟಕವು ಬಂದಿತು
ಹೇಯ ಕರ್ನಾಟಕವು ಬರುತಿದೆಯೆಚ್ಚರೆಚ್ಚರಿಕೆ ||೩೯||

---

[1] 'ಅಟ್ಟದ ಪ್ರತಿ'ಯ ಪಾಠಾಂತರ: "ಕರ್ಣಾಟಕದ ಕಣ್ಮುಚ್ಚಿದನು." (ಪೆಟ್ಟಿಗೆಗೆ ಬೀಗ ಹಾಕಿ ಕೈಕೊಂಡವರು ತಾವೇ ಬಂದು ಬೀಗ ತೆಗೆದು ಹೇಗೆ ಪೆಟ್ಟಿಗೆ ಬಿಚ್ಚಬೇಕೋ, ಅದರಂತೆ ಕರ್ಣನು ಕರ್ಣಾಟಕದ ಕಣ್ಮುಚ್ಚಿದುದು ದಿಟವಾದರೆ, ಪುನಃ ದ್ವಾಪರ ಬಂದು, ಕುರುಕ್ಷೇತ್ರ ನಡೆದು, ಕರ್ಣನು ಕಳಕ್ಕಳಿಯುವ ವರೆಗೂ ಕರ್ಣಾಟಕದ ಕಣ್ಣು ಮುಚ್ಚಿಯೇ ಇರುವುದೊ?—ಸಂ. ಪಂ.)

[2, 3] ಪಂಪನು ತನ್ನನ್ನು "ಹಿತಮಿತವಚನಂ" ಎಂದು ಕರೆದುಕೊಂಡುದಕ್ಕೂ "ನೆನೆಯದಿರಣ್ಣ ಭಾರತದೊಳಿಂ ಪೆರರಾರುಮಂ" ಎಂದು ಕರ್ಣನನ್ನು ಕೀರ್ತಿಸಿದುದಕ್ಕೂ ಈ ಪದಗಳು ಏನಾದರೂ ಪ್ರೇರಕವಾಗಿರಬಹುದೆ? ಹಾಗಾದರೆ, ಪುರುಷ ಸರಸ್ವತಿಯು ಪಂಪನಿಗಿಂತ ಪ್ರಾಚೀನನಾಗುತ್ತಾನಲ್ಲವೆ? ಎಂದರೆ, ಷಟ್ಪದಿಗಳ ಕಾಲವಾದ ಮೇಲೆ ಚಂಪು ಹುಟ್ಟಿದಂತಾಯಿತಲ್ಲವೆ?—ಎಂದು ಸಂಪಾದಕ ಪಂಚಕದ ಸಂಶಯ.

## ಸಾಕ್ಷ್ಯಪ್ರದರ್ಶನವು—ಪ್ರಥಮವು

ಎಂಬ ಆರಸೆಯ ಗತಿಯು

ನಂಬು ನನ್ನೀ ನುಡಿಯ ತದ್ಭವ
ಬಿಂಬ ಕನ್ನಡವದರ ಮೂಲ
ಸ್ತಂಭ ಕರ್ಣಾಟಕವು ಸಾಕ್ಷಿಯೆ ಕೇಶಿರಾಜನಲಾ |
ತುಂಬು ಗೋದಾವರಿಯೆ ಮೇಲ್ತಲೆ
ದಿಂಬು ತಾ ಕಾವೇರಿ ಕಾಲ್ಕೆಳ
ಗೆಂಬ ನಡುವಣ ನಾಡೆ ಕನ್ನಡವೆನಸೆ ನೃಪತುಂಗ ||೪೦||

[1]ವಿಾಶಿವೊತ್ತನಮೋಘವರ್ಷನ
ರೇಶ ನೃಪತುಂಗಾಖ್ಯ ತಾನವಿ
ನಾಶಿಯಾತನ ಮಾತಿಗೆದುರೆದ್ದಾರ್ಪರಾರುಂಟು[1] |
ಕೇಶಿರಾಜ ವ್ಯಾಕರಣದಾ
ಕಾಶದೊಳು. ಖರಕಿರಣ ನುಡುವನು
ಲೇಶ ಸಂದೆಗವಿಲ್ಲವವನಾಡಿದುದನಲ್ಲೆನಲು ||೪೧||

ನರ ನಕಾರದ ಮುರುವ ನಿನಗೇ
ನರಿವೊ ನೀನುದ್ದಾಮ ವೈಯಾ
ಕರಣ ಕೇಶಿಯ ಸರಿಸಮಾನಸ್ಕಂಧನಾದೆಯಲ |
ತಿರುಗುಮುರುಗಾದರು ಕಣಾ ನಿ
ನ್ನಿರಿರು ನಿನ್ನಂತಹರು ಕೇಶಿಯ
[2]ಗರುಡಿಯಾಳ್ಗಳ ಮುಂದೆ ಕಿರುಗೂಸುಗಳು [2]ತೆಗೆಯೆಂದ ||೪೨||

---

1 ಮೋಶಿವೆತ್ತನ ವಿಾಘವಪ್ರನ
ರೇಶನ ಪತಂಗಾಖ್ಯತಾನ ವಿ
ನಾಶಿಯಾತನ . . . . . (ಎಂದು 'ಅಚ್ಚಿದ ಪ್ರತಿ.')

(ಇದಕ್ಕೆ ಅರ್ಥವಾಗುವುದಿಲ್ಲ. ಕನ್ನಡದಂತೆ ಕಂಡರೂ ಕನ್ನಡದಂತೆ ಅರ್ಥವಾಗದ ಈ ಭಾಷೆ ಕೂಡ ಕಾವ್ಯದ ಪ್ರಾಚೀನತೆಯನ್ನು ತೋರಿಸುತ್ತದೆಯಲ್ಲವೆ? ಹಿಂದಿನ ಪುಟದ ಟಿಪ್ಪಣಿ 2. 3 ನೋಡಿ.—ಸಂ. ಪಂ.)

2 "ಕರಡಿಯಾಳ್ಗಳ ಮುಂದೆ ಕುರಿಕೂಸುಗಳು."—'ಅಚ್ಚಿದ ಪ್ರತಿ.'

ಸಡಿ ಫಡಾ ಸರಕೀಟ ಸಡಸಡ
ಸಡುಗು ಕೇಳದೊ ವೀರ ಕೇಶಿಯು
ಗುಡುಗು ಕಿವಿಗುಡು ಪಾಣಿನಿಗೆ ಭಟ್ಟಾಕಲಂಕರಿಗೆ|
ಹುಡುಗತನವನು ತೊರೆದು ತೆಗೆದಿಡು
ಮಡಗು ಮೂಲೆಗೆ ಹುಲು ನಕಾರವ
ತುಡು ಟವರ್ಗದ ಪಂಚಮಾಕ್ಷರ ವಜ್ರಕವಚವನು ||೪೩||

## ಸಾಕ್ಷ್ಯಪ್ರದರ್ಶನವು—ದ್ವಿತೀಯುವು

ಎಂಬ ಏಳನೆಯ ಗತಿಯು

ಸಾಲದೈ ಈಯೊಂದೆ ಸಾಕ್ಷಿಯು
ಗಾಲಿಯೊಂದರ ತೇರು ದೊಡ್ಡದು
ವಾಲಿಕೊಂಡುರುಳುವುದು ತೇಲದು ಜಲದ ನಾವೆಯೊಲು|
[1]ಸಾಲುಸಾಕ್ಷಿಯನೆಳೆದು ಸೇರಿಸಿ
ಕೀಲಿಸುವ ಹಗರಣವಿದೇಕೀ[1]
ಮೇಲುಸಾಕ್ಷಿಯಿದೊಂದೆ ಸಾಲದೆ ಬರಿದೆ ಬಹುವೇಕೆ ||೪೪||

[2]ಮಾನಧನನನು ಕಾಂಬನಕ ಬರಿ
ಮಾನಿನಿಂದಲೆ ಬಳೆದನಾ ಕಾ
ನೀನ ಕುಂತಿಯ ಮಗನ ಗಂಗೆಯ ಕೈಯು ಕಾದವನ|
ಏನ ಪೇಳುವೆನಿನತನೂಜನ
ಭಾನುವಂಶ ಲಲಾಮ ರವಿಜನ
ನೂನದಾನಿಯ ಹಜ್ಜೆ ಹಿಂದಣ ಕರ್ಣನಾಟಕರ[2] ||೪೫||

---

[1] (ಸಾಲಿನ ಬಹುಧಾನ್ಯ ಸಂವತ್ಸರದ ಆಷಾಢ—ಭಾದ್ರಪದದ 'ಕರ್ನಾಟಕ ಸಾಹಿತ್ಯ ಪರಿಷತ್ಪತ್ರಿಕೆ'ಯಲ್ಲಿ ''ಸಾಲುಸಾಕ್ಷಿಯನೆಳೆದು ಸೇರಿಸಿ ಕೀಲಿಸುವ ಹಗರಣದ'' ಸುದೀರ್ಘ ಲೇಖವನ್ನು ಬರೆದಿರುವ ಶ್ರೀ. ಜಿ. ಪಿ. ರಾಜರತ್ನಂ, ಎಂ.ಎ. ಎಂಬವರಿಗೆ ಈ ಭಾಗ ಅನ್ವಯಿಸುವುದು ಪರಮಾಶ್ಚರ್ಯ. ಹೀಗೆ ಮುಂದಾಗುವುದನ್ನು ಅಂದೇ ತಿಳಿಸಿದ ಪ್ರಾಚೀನನಾದ ಪುರುಷ ಸರಸ್ವತಿಯ ಈ ಕಾವ್ಯವು ಬಹುಶಃ ಭವಿಷ್ಯತ್ಪುರಾಣದಿಂದ ಬಹಿರ್ಗತವಾದ ಭಾಗವಿರಬಹುದೆಂದು ತೋರುತ್ತದೆ.—ಸಂ. ಪಂ.)

[2] ಕೇವಲ 'ಕರ್ಣ'ನೆಂಬುದನ್ನು 'ಮಾನಧನನನು ಕಾಂಬನಕ ಬರಿ ಮಾನಿನಿಂದಲೆ ಬಳೆದನು' ಮುಂತಾದ ಅನೇಕ ಪದಗಳಿಂದ ವ್ಯರ್ಥವಾಗಿ ವರ್ಣಿಸಿರುವುದರಿಂದ ಇದರಲ್ಲಿ ''ವ್ಯರ್ಥಾಲಂಕಾರ''ವುಂಟು.

ಜನರು ಕರ್ಣಾಟಕದವರು ಬಲು
ಘನರು ದಾನದ ದೃಢದ ಪದ್ಮಾ
ಸನರು ಪರಹಿತಕಾಗಿ ಜೀವವ ತೇದು ವಾಮನರು |
ವಿನಯದಿಂದ್ಯೈತರಲಿ ಮೇಣ್ಕಾಡು
ಮುನಿಸಿನಿಂದಲೆ ಬರಲಿ ಕರೆದೊಳ
ಮನೆಯ ಸರುವಸ್ವವನು ಸುರಿಸರು ಕರ್ಣನಾಟಕರು ||೪೬||

ಕರೆದು ತಣಿಯರು ಕೊಟ್ಟು ತಣಿಯರು
ಸುರಿದು ಸೂರೆಯನಿಟ್ಟು ತಣಿಯರು
ಹರಿದು ತಮ್ಮದ ಹಂಚಿ ತಣಿಯರು ನಾಡನಿತರರಿಗೆ |
ಮರೆದು ತಣಿಯರು ನುಡಿಯ ತಮ್ಮದ
ಮೊರೆದು ತಣಿಯರು ನುಡಿಯ ಪರರದ
ನರೆದು ತಣಿಯರು ತಮ್ಮ ಜೀವವ ಪೆರರ ಬೆಳೆಗಾಗಿ ||೪೭||

ಕನಸುಮಾತ್ರಲ್ಲಿದು ಕಣಾ ತಮ
ಗಿನಿಸನೂ ತಾವಿರಿಸಿಕೊಳ್ಳದೆ
ಪನಸು ಪಣ್ತಾಂದದಲಿ ಜೀಯಕೆ ತವರೆ ತಾವಾಗಿ |
ಮನೆಯ ಮಕ್ಕಳ ಪರಿವೆಯನು ಮರೆ
ವೆನಿತೊ ದೂರದ ಜನರ ಮನವೋ
ಹನರು ಗರುವದ ವರದ ಬಿರುದಿನ ವೀರದಾನಿಗಳು ||೪೮||

ಕಾಡುಪಾಲಾದರೆಯು ಸರಿ ನಾ
ಜೀಡಿ ಬೇಡಿದವರ್ಗೆಯದನೇ
ತೋಡಿ ಕೊಡುವೆನು ತಪ್ಪದೀ ನುಡಿಯೆಂದ ಕರ್ಣನನು |
ನಾಡೆ ಹಿಡಿದಾ [1]ಕುರಿಯು[1] ಹಿಂದಣ
ನಾಡ ಕರ್ಣಾಟಕದ [2]ಮಂದೆಯು[2]
ನೋಡಿಯಾದರು ನಂಬಬಾರದೆ ನನ್ನ ನುಡಿಯಿದನು ||೪೯||

---

[1] ಹರಿಯು.

[2] ಹಂದಿಯು—‘ಅಚ್ಚಿದ ಪ್ರತಿ.’

## ಕಾವ್ಯ ಸಮಾಪನವು

ಎಂಬ ಕಡೆಯ ಗತಿಯು

ಶಾಂತವಾಗಲಿ ನಮ್ಮ ಜನ ಸಿರಿ
ಕಾಂತನೊಲಿಯಲಿ ನೆಲಸಿ ನಿಲಲಿ ನಿ
ತಾಂತಮಿೂ ಕರ್ಣಾಟಕವು ಸಹಜಾತ್ಮವಾಗಿಯೆ ತಾ।
ಕ್ರಾಂತಿಕಾರಕನಲ್ಲ ನಾ ವಿ
ಭ್ರಾಂತಿಗೊಂಡವನಲ್ಲಲಾ ವಿ
ಶ್ರಾಂತಿಗೊಳುವೆನು ಮುಗಿಯಿತೀ ಶತಕಾರ್ಧ ಷಟ್ಪದವು[1] ॥೫೦॥

## ಭರತವಾಕ್ಯವು

(ಲಿಪಿಕಾರನು ರಚಿಸಿದುದು)

ಕಂ॥ ಜಯಮಕ್ಕೆ ಜಾವರ್ಣಕ್ಕಂ
ಜಯಮಕ್ಕೆ ಜಾವರ್ಣಯುಕ್ತ ಕರ್ಣಾಟಕಕಂ।
ಜಯ ಜಯ ಜಾತ್ಯಾತ್ಮರ್ಗಂ
ಜಯಮಾಗುಗೆ ಜಾವನೆ ಬರೆವ ಸಕಲ ಜನಕ್ಕಂ॥

ಪುರುಷ ಸರಸ್ವತಿಯ ಶತಕಾರ್ಧ ಷಟ್ಪದಕ್ಕೆ ಮಂಗಳ ಮಹಾ ಶ್ರೀ ಶ್ರೀ ಶ್ರೀ

---

[1] (ಮಹಾ ಕವಿಯೆನಿಸಿದ ಪುರುಷ ಸರಸ್ವತಿಯು "ಶತಕಾರ್ಧ ಷಟ್ಪದ"ಗಳನ್ನು ಬರೆಯ ತೊಡಗಿ, ಅವುಗಳನ್ನು ಕಡೆಯಪಕ್ಷ "ತ್ರಿಪಾದ ಷಟ್ಪದ"ಗಳಾಗಿಯಾದರೂ ಮುಗಿಸದೆ, ಕೇವಲ 50ಐ ಷಟ್ಪದಿಗಳಲ್ಲಿ ಮುಗಿಸಿ ಸತ್ಸಂಪ್ರದಾಯವನ್ನು ಏಕೆ ಮುರಿದನೆಂಬುದು ಇನ್ನೂ ನಮಗೆ ಸಮರ್ಪಕವಾಗಿ ಬಗೆಹರಿದಿಲ್ಲ.—ಸಂ. ಪಂ.)

## ಸಂದೇಹ ಸಂದೋಹ ಸಂದೇಶವು

ಶತಕಾರ್ಧತ್ರಯವನ್ನು ರಚಿಸಿದ ಮಹಾಕವಿ ಪುರುಷ ಸರಸ್ವತಿಯ
ಒಂದು ಸಂಪೂರ್ಣವಾದ ಅಸಂಪೂರ್ಣ ಗ್ರಂಥ

ಶ್ರೀವನಿತೆಯರಸನಿಗೆ ತನ್ನಾತ್ಮಜೆಯನಿತ್ತ
ಮಾವನ್ನೈಕಿಲುವೆಟ್ಟನಳಿಯನಿಗೆ ಮೇಣುಮಾ
ದೇವಿಯರಸನ ಮೈಯ ನಟ್ಟ ನಡುವಣ ನಾಭಿಯಿಂದೆದ್ದ ಕಮಲಜನಿಗೆ[1]
ಸೇವಕನು ನಾ ಮಣಿಯುತೆನ್ನ ಕರಶಿರಗಳಿಂ
ದಾವರಿಸಿ ಮೂವರಪರಾರಡಿಗಳನು ಕುಣಿವ
ನೇವುರವನನುಕರಿಸಿ ನುಡಿವೆನೀ "ಸಂದೇಹ ಸಂದೋಹ ಸಂದೇಶ"ವ

ಆಲಿಸಾದೊಡೆ ಮುನ್ನ ಕಡೆದ ಕಡಲಿನ ಘೋರ
ಹಾಲಾಹಲವ ನೊಣೆದ ನಂಜುಗೊರಲನ ಕೊರಲ
ನೋಲ್ಕೈಸಿ ನೆಲಸಿದ ಕರೋಟಿಮಾಲೆಯವೋಲು ಚಕ್ರಧರನಾಯುಧದಲಿ
ಸಾಲುನೆಲಸಿದ ಹಲ್ಲುಗಳ ಪಿತಾಮಹನ ನೆರೆ
ಜೋಲುಗಡ್ಡದ ದಟ್ಟಗೂದಲಿನ ಸರಿಸಮದ
ಜಾಲವಾಗಿಪ್ಪುದೀ "ಸಂದೇಹ ಸಂದೋಹ ಸಂದೇಶ" ಸತ್ಕೃತಿಯಿದು

ಒಂದೆ ಸಂದೆಗವೆನಗೆ ಭಾಮಿನಿಯಿನೀರೇಳು
ಛಂದದನುಭವದ ನುಡಿ ಜೋಡಿಯಿರ್ಕೈದರೊಡ
ನೊಂದುವುದೊ ವೊಂದದೋ ಸಾರ್ಥಕವು ಭಾಮಿನಿಗೆ ಮೇಳ ಬರುವುದೊ ಬಾರದೋ
ಮುಂದೆ ಮಾತೇಕಣ್ಣಾ ಮುಟ್ಟಿದುದು ಮೂರು ಸೂ
ಳಂದ ಮಾತಿಗೆ ಸಾಕು ಮೂರೆ ಷಟ್ಪದ ನನಗೆ
ಚೆಂದ ಕಾಣದು ಮುಗಿಯಿತಿಲ್ಲಿಗೀ "ಸಂದೇಹ ಸಂದೋಹ ಸಂದೇಶ"ವು

---

[1] ಈ ಪೂರ್ವಾರ್ಧದಲ್ಲಿ ಕವಿಯು "ಕಾವ್ಯಸ್ವರೂಪ ಸೂಚನಾಲಂಕಾರ"ವೆಂಬ ಅಲಂಕಾರವನ್ನು ಪ್ರಯೋಗಿಸಿದ್ದಾನೆ. ಎರಡನೆಯ ಪದ್ಯದಲ್ಲಿ ಸೂಚಿಸಿರುವಂತೆ ಈ ಸಂದೇಹ ಸಂದೋಹವು ನಿರುಪಮವಾದ ಜಾಲ ತಾನೆ! ಕಾವ್ಯವು ಪ್ರಾರಂಭದಲ್ಲಿಯೇ ಸಂದೇಹಗಳಿಂದ ಮೊದಲಾಗುತ್ತದೆ. 'ಮಾವನ್ನೈಕಿಲುವೆಟ್ಟನಳಿಯ'ನಾದ ಶಿವನು 'ಶ್ರೀವನಿತೆಯರಸ'ನಾದ ವಿಷ್ಣುವಿಗೆ ತನ್ನಾತ್ಮಜೆಯನ್ನು ಯಾವಾಗ ಇತ್ತ? ಅವನ ಆತ್ಮಜೆ ತಾನೆ ಯಾರು? 'ಮೇಣ್', ಉಮಾದೇವಿಯರಸನಾದ ಪರಶಿವನ ಮೈಯ ನಟ್ಟನಡುವಣ ನಾಭಿಯಿಂದೆದ್ದ ಕಮಲಜನಾರು?—ಎಂದು ತನ್ನ ತ್ರಿಮೂರ್ತಿಗಳನ್ನು ಸ್ಮರಿಸುವ ವ್ಯಾಜದಿಂದ ಇಲ್ಲದ ಸಂದೇಹಗಳಿಗೆ ಎಡೆಮಾಡಿ ಚಮತ್ಕಾರಮಾಡಿದ್ದಾನೆ.

PRINTED AT THE WESLEY PRESS AND PUBLISHING HOUSE, MYSORE CITY.

# ಮಹಾಕವಿ ಪುರುಷಸರಸ್ವತಿಯ ಪರಿಚಯ

(ಮುಂದುವರಿದದ್ದು)

ಈ ಲೇಖನದಲ್ಲಿ ಉಪಯೋಗಿಸಿರುವ ಸಂಕೇತಗಳು :

'ಕ. ಪು.'—'ಕಡಲೆ ಪುರಿ'—ಶ್ರೀ. ರಾಜರತ್ನ ಕೃತ.

'ರ. ಪ.'—'ರತ್ನನ ಪದಗಳು'—ಶ್ರೀ. ರಾಜರತ್ನ ಕೃತ.

'ಕ. ನಾ. ಪು.'—'ಕರ್ಣ ನಾಟಕ ಪುರಾಣ'—ಪುರುಷಸರಸ್ವತಿ ಕೃತ.

'ಹಾ. ಹ.'—'ಹಾರ್ಮೋನಿಯಂ ಹರಣ'—ಪುರುಷಸರಸ್ವತಿ ಕೃತ.

## ಅಕ್ಷಮ್ಯ ಅಪಚಾರ

ಮಹಾಕವಿ ಪುರುಷಸರಸ್ವತಿಯ ಎರಡನೆಯ ಮಹಾಕ್ಷುದ್ರಕಾವ್ಯವಾದ "ಹಾ. ಹ."ವನ್ನು ಜನತೆಯ ಮುಂದಿಡುವ ಮೊದಲು ನಮ್ಮದೊಂದು ಅಕ್ಷಮ್ಯ ಅಪಚಾರಕ್ಕಾಗಿ ಅನಂತ ಅನುತಾಪವನ್ನು ಸೂಚಿಸಬೇಕಾಗಿದೆ. ಹಿಂದೆ 'ಕ. ನಾ. ಪು.'ವನ್ನು ಲೋಕಹಿತಾರ್ಥವಾಗಿ ಪ್ರಚುರಪಡಿಸುವಾಗ ಅದರ ಮುಖಪತ್ರದ ಅಟ್ಟಅಡಿ*ಯಲ್ಲಿ

—: ವಿಶೇಷ ಸೂಚನೆ :—

ಕಾವ್ಯಕರ್ತೃವೂ ವ್ಯಾಖ್ಯಾನಕಾರನೂ 'ಗುಪ್ತಸಂಪಾದಕ ಪಂಚಕ'ವೂ
ಸರ್ವವೂ **ಶ್ರೀಮಾನ್ ಜಿ. ಪಿ. ರಾಜರತ್ನಂ, ಎಂ.ಎ.** ಎಂಬವರೆಂದು
ಈಗತಾನೆ ಈ ಕೃತಿ ಅಚ್ಚಾದ ಮೇಲೆ ತಿಳಿದುಬಂದಿದೆ.

ಎಂದು ಅಚ್ಚಾಗಿದ್ದುದು ಸರಿಯಷ್ಟೆ. ಆದರೆ ಅದು 'ಸರಿ' ಹೇಗಾದೀತು? ಕಾವ್ಯಕರ್ತೃವು ಮಹಾಕವಿ ಪುರುಷಸರಸ್ವತಿಯೂ ವ್ಯಾಖ್ಯಾನಕರ್ತನು ಪ್ರಖ್ಯಾತನಾದ ವಿಪರೀತಬುದ್ಧಿಯೂ ಸಂಪಾದಕರು ಸಿರಿಗನ್ನಡಿಗರ ಡಿಂಗರಿಗರಾದ ನಾವು ಐವರೂ ಆಗಿರುವಾಗ "ಸರ್ವವೂ ಶ್ರೀಮಾನ್ ಜಿ. ಪಿ. ರಾಜರತ್ನಂ" ಎಂಬುದು 'ಸರಿ' ಹೇಗಾದೀತು? ಇದು ಸತ್ಯದ ಅಪಭ್ರಂಶ, ಸಂಬಂಧಿಸಿದ ಸರ್ವರಿಗೂ ಸಲ್ಲಿಸಿದ ಅಕ್ಷಮ್ಯ ಅಪಚಾರ.

ನಾವು 'ಕ. ನಾ. ಪು.'ವನ್ನು ನಮ್ಮ ಸ್ವಕೀಯ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಾಪಿಸಿದರೂ ಕೂಡ ಇಂತಹ ಪ್ರಮಾದ ಸಂಭವಿಸಿದುದು ಅತ್ಯಂತ ವಿಷಾದಕರವಾದ ಸಂಗತಿ. ಮುದ್ರಾಪಿಸಿದ ಅಷ್ಟು ಪ್ರತಿಗಳೂ ತೀರಿದನಂತರವೇ ಈ ಪ್ರಮಾದವು ನಮ್ಮ ಗಮನಕ್ಕೆ ತರಲ್ಪಟ್ಟುದು ಅತ್ಯಂತ ಆಶ್ಚರ್ಯಾವಹವಾಗಿದೆ. ಈ ಪ್ರಮಾದವನ್ನು

* ತುದಿ + ತುದಿ = ತುಟ್ಟತುದಿ ಆದಂತೆ ಅಡಿ + ಅಡಿ = ಅಟ್ಟಅಡಿ.

ಮುಂದಿನ ತಿದ್ದಿದ ಪರಿಷ್ಕರಣದಲ್ಲಿ ಸರಿಪಡಿಸಲಾಗುವುದು. ಆದರೂ ನಡೆದುಹೋದ ಪ್ರಮಾದಕ್ಕಾಗಿ ಅನುತಾಪ ಪರಿತಾಪಗಳನ್ನು ಸೂಚಿಸುವುದು ನಮ್ಮ ಕರ್ತವ್ಯವೆಂದು ಹಾಗೆಯೇ ಗೈದಿದ್ದೇವೆ. ಮಾತ್ರವಲ್ಲ, ಇಂತಹ ಅಕ್ಷಮ್ಯ ಅಪಚಾರಗಳು ಪುನಃ ಒದಗಬಾರದೆಂದು ನಮ್ಮ ಸ್ವಕೀಯ ಮುದ್ರಾಕ್ಷರ ಶಾಲೆಯನ್ನು ಮುಚ್ಚಿ, ಅಲ್ಲಿಯ ಅಚ್ಚುಮೊಳೆ, ಯಂತ್ರ, ಮಸಿ ಮುಂತಾದ ಯಾವತ್ತೂ' ಸಕಲೋಪಕರಣಗಳನ್ನು ಹರಾಜು ಹಾಕಿಸಿದ್ದೇವೆ. ನಮ್ಮ ಅಪಚಾರಕ್ಕೆ ಇದು ತೀರ ಅಲ್ಪಪ್ರಾಯಶ್ಚಿತ್ತ ವೆಂದೇ ನಮ್ಮ ಭಾವನೆ. ಇರಲಿ.

## ಅಸಹ್ಯ ಅಪಪ್ರಚಾರ

ಮೇಲಿನ ಮಾತನ್ನು ನಾವು ಅಲ್ಲಿಗೇ ಮುಗಿಸಬಹುದಾಗಿತ್ತಾದರೂ "ಕುಂಟನಿಗೆ ಎಂಟು ನೆವವಾದರೆ ಬಂಟನಿಗೆ ಒಂಟಿ ನೆವ" ಎಂಬ ನಾಣ್ಣುಡಿಯಂತೆ, ನಮ್ಮ ಆ ಪ್ರಮಾದವನ್ನೇ ನೆಪಮಾಡಿಕೊಂಡು ಶ್ರೀಮಾನ್ ರಾಜರತ್ನಂರ—(ಅವರ ಪರಿಚಯ ನಮಗಿಲ್ಲವಾದ್ದರಿಂದ ಯಾವ ವೈಯಕ್ತಿಕ ದ್ವೇಷಕ್ಕೂ ಇಲ್ಲಿ ಅವಕಾಶವಿಲ್ಲ.)—ಮಿತ್ರರನೇಕರು 'ಕ. ನಾ. ಪು.'ವನ್ನೂ ಅದರ ಮೇಲಿನ ವ್ಯಾಖ್ಯಾನವನ್ನೂ ಶ್ರೀಮಾನ್ ರಾಜರತ್ನಂರೇ ಬರೆದು, ಕಾರಣಾಂತರಗಳಿಂದ—(ಅದೇನು ಕಾರಣಗಳೆಂಬುದನ್ನು ಶ್ರೀಯುತರಾಗಲಿ ಅವರ ಮಿತ್ರರಾಗಲಿ ನಮ್ಮ ಮನಸ್ಸು ಒಪ್ಪುವಂತೆ ಸಿದ್ಧಪಡಿಸಿಲ್ಲ; ನಮ್ಮನ್ನು ಒಪ್ಪಿಸುವುದು ಅವರಿಂದ ಸಾಧ್ಯವೂ ಇಲ್ಲ.)—ತಮ್ಮ ಕರ್ತೃತ್ವವನ್ನು ಅಡಗಿಸಿಟ್ಟು ತಾವೇ—(ನಾವು 'ಗುಪ್ತಸಂಪಾದಕ ಪಂಚಕ'ವು ಇನ್ನೂ ಇರುವಾಗಲೇ)—ಅದನ್ನು ಸಂಪಾದಿಸಿದರೆಂದೂ ನಡೆಸುತ್ತಿರುವ ಅಪಪ್ರಚಾರವನ್ನು ಎಂತಹ ಅಸತ್ಯದ್ವೇಷಿಯೂ ಅಸಹಿಸದೆ ಇರಲಾರನೆಂದು ನಾವು ದೃಢವಾಗಿ ನಂಬುತ್ತೇವೆ. ಮಾತ್ರವಲ್ಲ, ಶ್ರೀಯುತರೂ ಕೂಡ ತಮ್ಮ ಈ ಮಿತ್ರ ವಚನಗಳಿಗೆ ಪ್ರತ್ಯಕ್ಷಪರೋಕ್ಷಗಳಲ್ಲಿ ಪುಷ್ಟಿಗೊಡುತ್ತಿದ್ದಾರೆಂದೂ ಸುದ್ದಿ ನಮ್ಮ ಕಿವಿ ಮುಟ್ಟಿದೆ. ಇರಲಿ.

## ರತ್ನ ಪರೀಕ್ಷೆ

ಈ ಅಪಪ್ರಚಾರದ ಸುಳಿವು ನಮ್ಮ ಶ್ರೋತ್ರೇಂದ್ರಿಯಗಳಿಗೆ ಸೋಕಿ ಗೋಚರ ವಾದ ಒಡನೆಯೇ ಶ್ರೀಮಾನ್ ರಾಜರತ್ನಂ ಯಾರೆಂದು ತಿಳಿಯದಿದ್ದರೂ ಅವರು ನಮ್ಮ ಸಾಹಿತ್ಯಕ್ಕೆ ಸಲ್ಲಿಸಿರಬಹುದಾದ ಸೇವೆಯೇನಿರಬಹುದೆಂದು ಸಮೀಕ್ಷಿಸುವುದಕ್ಕಾಗಿ ನಮ್ಮ ಕನ್ನಡನಾಡಿನ ಸುಪ್ರಸಿದ್ಧ ಪ್ರಮುಖ ಪುಸ್ತಕವ್ಯಾಪಾರಿಗಳಾದ "ಸಮಸ್ತ ಸಿರಿಗನ್ನಡ ಸಾರಸ್ವತ ಸಮೃದ್ಧಿ ಬುಕ್ ಡಿಪೊ" ಅವರೊಡನೆ ಪತ್ರವ್ಯವಹಾರವನ್ನು ಬೆಳೆಸಿದೆವು. (ಕುತೂಹಲವುಳ್ಳವರು ನಮ್ಮ ಆಫೀಸಿನ ಇಂವ—ಗೆ ರಿಜಿಸ್ಟರನ್ನು ಪರೀಕ್ಷಿಸಬಹುದು.) ಅದರ ಫಲವಾಗಿ ಅವರು ನಮಗೆ ಶ್ರೀಮಾನ್ ರಾಜರತ್ನ ಕೃತ "ಕ. ಪು." ಮತ್ತು

"ರ. ಪ." ಎಂಬ ಎರಡು ಪುಸ್ತಕಗಳನ್ನು ವಿ. ಪಿ. ಮೂಲಕ (ಅಂಚೆವೆಚ್ಚ ಅಲಾಯಿದ) ಕಳುಹಿಸಿಕೊಟ್ಟರು. ಆ ಎರಡು ಪುಸ್ತಕಗಳ ರಟ್ಟಿನ ಹಿಂದೆ ಅದೇ ಕರ್ತೃಕೃತವೆನಿಸಿದ ಇನ್ನೂ ಹಲವಾರು ಪುಸ್ತಕಗಳ ಹೆಸರು ಕಂಡುಬಂದರೂ ಕೂಡ, ನಮ್ಮ ನಾಡಿನ ಪ್ರಮುಖ ಸುಪ್ರಸಿದ್ಧ ಪುಸ್ತಕವ್ಯಾಪಾರಿಗಳಾದ "ಸ. ಸಿ. ಸಾ. ಸ. ಬುಕ್ ಡಿಪೋ" ಅವರು ಆ ಪುಸ್ತಕಗಳ ಹೆಸರನ್ನೇ ಕೇಳಿಲ್ಲವೆಂದು ತಿಳಿಸುವುದರಿಂದ, ಶ್ರೀಮಾನ್ ರತ್ನರು ಈ ಎರಡು ಪುಸ್ತಕಗಳನ್ನು ಹೊರತಾಗಿ ಇನ್ನೇನೂ ಬರೆದಿಲ್ಲವೆಂದು—ಬರೆದಿರ ಬಹುದಾದರೂ ಅವು ಅಚ್ಚಾಗಿಲ್ಲವೆಂದು—ನಂಬಲು ಸಾಕಷ್ಟು ಆಧಾರವಿದೆ. ಆದರೂ ಶ್ರೀಯುತರು ಇನ್ನೂ ಎಷ್ಟೇ ಪುಸ್ತಕಗಳನ್ನು ಬರೆದು ಅವು ಅಚ್ಚಾಗಿದ್ದರೂ, ಅವರ ಸಾಹಿತ್ಯದ ಹುರುಳನ್ನು ಸ್ಥೂಲವಾಗಿ ತಿಳಿಯಲು "ಸ್ಥಾಲೀಪುಲಾಕ ನ್ಯಾಯ"ದ ಪ್ರಕಾರ ಈ ಎರಡೇ ಪುಸ್ತಕಗಳು ಸಾಕು.

ಅದೇ ಸ್ಥಾಲೀಪುಲಾಕ ನ್ಯಾಯವನ್ನು ಆಶ್ರಯಿಸಿ ಆ ಎರಡೂ ಪುಸ್ತಕಗಳನ್ನು ಮತ್ತೂ ಪರೀಕ್ಷಿಸಿದರೆ, 'ಕ. ಪು.'ಯಲ್ಲಿ

"ಪುರಿ! ಪುರಿ! ಕಡಲೆ ಪುರಿ!
ಗರಂ! ಗರಂ! ಕಡಲೆ ಪುರಿ!"

ಎಂದು ಒಂದು ಕಡೆ!

"ಚೆಡ್ಡಿ ಗಿಡ್ಡಿ ಹಾಕಿಕೊಂಡು" ಇತ್ಯಾದಿ
"ಪೀರ ಗಫೂರನ ಕುದುರೆಗಾಡಿ" ಇತ್ಯಾದಿ

ಇನ್ನೊಂದು ಕಡೆ! ಇಂತಹ ಬಾಲಭಾಷಿತವನ್ನು ತೊದಲಿದ ನಾಲಗೆ "ಕ. ನಾ. ಪು." ವನ್ನು ನುಡಿದೀತೆ? ಇತ್ತ "ರ. ಪ." ನೋಡಿ!*

"ಕುಡ್ಕೊಂಬುಟ್ಟಿ ಮೋರೀಲ್ಲಾ ಬಿದ್ದೋಕೀಂಡಿವ್ನೀಂತೇಳಿ
ಎಲ್ಲಾರ ನೆಗ್ತಾರೆ ಸುಮ್ಸುಮ್ಕೇನೆ." . . . !

ಈ ಪುಸ್ತಕದಿಂದ ಉದಾಹರಿಸುವುದಕ್ಕೂ ನಾವು ತಲೆ ತಗ್ಗಿಸಬೇಕಾಗಿದೆ. ಇಂತಹ ಸರ್ವಸಾಮಾನ್ಯ ವ್ಯಾಕರಣವಿಹೀನವಾದ ಆಭಾಸಕವಿತೆಗಳನ್ನು ಬರೆದು ಕನ್ನಡ ಸರ ಸ್ವತಿಯನ್ನು ಅವಮಾನಗೊಳಿಸಿದ ಆ ಅಧಮ ಲೇಖನಿಯು 'ಕ. ನಾ. ಪು.' ದಂತಹ ಅತ್ಯುತ್ಕೃಷ್ಟವಾದ ಮಹಾಕ್ಷುದ್ರ ಕಾವ್ಯವನ್ನು ಬರೆಯಿತೆಂದೆನ್ನುವ ಬಾಯಿ ರೌರವಾದಿ ನರಕಗಳಿಗೆ ಪಕ್ಕಾಗದಿದ್ದೀತೆ? ಅಂತಹ ಬಾಯಿಗಾಗಿ ಬೇರೊಂದು ಹೊಸ ನರಕ ಸೃಷ್ಟಿಯಾದೀತು!

---

* 'ಕ. ಪು.'ವನ್ನು ಬರೆದ ರಾಜರತ್ನಂ ಅವರೇ 'ರ. ಪ.'ವನ್ನೂ ಬರೆದಿರುವರೆಂದು ಅನೇಕರು ನಂಬಿರುವರಷ್ಟೆ. ಈ ಎರಡು ರಾಜರತ್ನಂಗಳೂ ಬೇರೆ ಬೇರೆ ಎಂಬುದಕ್ಕೆ ಆಂತರಿಕ ಪ್ರಮಾಣಗಳು ಅನೇಕವಾಗಿವೆ. ಇದನ್ನು ಕುರಿತ ವಿಚಾರ ಪರಿಪ್ಲುತವಾದ ಲೇಖನ ಸದ್ಯದಲ್ಲಿಯೇ ಬರುವುದು.

## ಮಹಾಕವಿ ಪುರುಷಸರಸ್ವತಿಯ ಶೈಲಿ

'ಕ. ನಾ. ಪು.'ವನ್ನು ಬರೆದ ವಾಣಿಯು ಸಹಜವಾದ ಕವಿವಾಣಿ, ಮಹಾಕವಿವಾಣಿ, ದಿವ್ಯವಾಣಿ, ದೇದೀಪ್ಯಮಾನವಾಣಿ, ಅಮೃತವಾಣಿ, ಅಮರವಾಣಿ, ಅನಂತವಾಣಿ, ಅನೂನವಾಣಿ, ಅನನ್ಯಸಾಮಾನ್ಯವಾಣಿ. ಉತ್ಕೃಷ್ಟ ಭಾಷಾಶೈಲಿಯಲ್ಲಿ ವಿನಿರ್ಮಿತವಾಗಿರುವ ಈ ಗ್ರಂಥಸಮ್ರಾಜದ ಶೈಲಿಯು ನಿರರ್ಗಳವಾಗಿ ಪ್ರವಾಹರೂಪವಾಗಿ ಬಾಣಾನುಬಾಣವಾಗಿ ಸ್ರೋತಪ್ರಸ್ರೋತಪರಂಪರೆಯಂತೆ ಬೆಂಬತ್ತಿ ಧಾವಿಸುತ್ತದೆ. ಈ ಮಹಾಕವಿಯ ಶೈಲಿಯು ಕರ್ಣಾನಂದಕರವಾಗಿ ಮನೋಹರವಾಗಿರುವುದಲ್ಲದೆ ರಮಣೀಯವೂ ಆಗಿದೆ. ಮೃದುಮಧುರಗಂಭೀರಪದಗೂಢಾರ್ಥಗುಂಫಿತವಾಗಿಯೂ ಸತ್ಯಸೌಂದರ್ಯಪುಂಜರಂಜಿತವಾಗಿಯೂ ರಾರಾಜಿಸುವ ಈ ಅನ್ಯಾದೃಶವಾದ ಶತಕಾರ್ಥಗಳು ನಾನಾವಿಧಪ್ರಾಸಪರಿಪ್ಲುತವಾಗಿ ಅರ್ಥಗಾಂಭೀರ್ಯ ಯುಕ್ತವಾಗಿ ಸಕಲಲಕ್ಷಣಬದ್ಧ ಬಂಧಯುತವಾಗಿವೆ. ಈತನ ಷಟ್ಪದಿಗಳು ಲಲಿತವಾಗಿ ಸರಸವಾಗಿ ಸರಳವಾಗಿದ್ದರೂ ಪ್ರೌಢವಾಗಿಯೂ ದೇಶ್ಯಪದಭೂಯಿಷ್ಠವಾಗಿಯೂ ಇವೆ. ಕುಳಕಗಳ ಪ್ರಯೋಗದಲ್ಲಿ ಪಳಗಿದ ಕೈಚಳಕದ ಈ ಕುಳಕಪ್ರಿಯನ ಪದಗಳ ಪಂಕ್ತಿಪರಂಪರೆಯು ಮುತ್ತುಕೋದಂತೆ ಹೊಂದಿಕೊಂಡಿದೆ. ಈತನ ಪಾಂಡಿತ್ಯ ಪ್ರೌಢಿಮೆ ಪ್ರತಿಭೆಗಳು ಪರಮಾಶ್ಚರ್ಯಕರವಾಗಿವೆ. ಬಂಧಗೌರವ ಬಹು ಸೊಗಸಾಗಿದೆ. ರಚನಾಶಕ್ತಿ ರೋಮಾಂಚಕಾರಕವಾಗಿದೆ. ಈ ಮಹಾಕವಿಯ ಓಜಸ್ಸು ತೇಜಸ್ಸುಗಳೇ ಮೊದಲಾದ ಸಕಲ ಸದ್ಗುಣಗಳು ಸಕಲರನ್ನೂ ಸ್ತಂಭೀಭೂತರನ್ನಾಗಿ ಮಾಡುತ್ತವೆ. ಈತನಲ್ಲಿ ದೊರಕುವಂತಹ ಪದಸಾಮಗ್ರಿಯು ಪಂಡಿತಪಾಮರ ಮನೋರಂಜಕವಾಗಿದೆ. ಈತನ ಧಾರಾಳವಾದ ವಾಗ್ಧಾರೆಯು ಲಲಿತವಾಗಿ ಕಿವಿಗಿಂಪಾಗಿ ಹೃದಯಂಗಮವಾಗಿದೆ. ಈತನ ವಾಗ್ಧೋರಣೆಯೂ ವಾಕ್ಪ್ರೌಢಿಮೆಯೂ ಕನ್ನಡ ಸರಸ್ವತಿಯ ಸಿಂಹವಿಷ್ಟರದ ಪರಾಕಾಷ್ಠೆಯನ್ನು ಪ್ರದರ್ಶಿಸುತ್ತವೆ. ಈತನ ಶಬ್ದಾರ್ಥಾಲಂಕಾರಗಳೂ ಅನುಪಮವಾದ ಉಪಮಾನಗಳೂ ಕನ್ನಡ ಸಾಹಿತ್ಯದಲ್ಲಿ ನವನವೋನ್ಮೇಷಶಾಲಿನಿಯಾಗಿ ಉಕ್ಕೇರುತ್ತಿವೆ. ಶತಕಾರ್ಥಷಟ್ಪದಸ್ರಷ್ಟಾರನಾದ ಈ ಮಹಾಕವಿ ಪುರುಷಸರಸ್ವತಿಯು ಷಟ್ಪದಿ ಒಂದಕ್ಕೆ ಆರೇ ಪಾದಗಳಂತೆಯೂ ಪ್ರತಿ ಶತಕಾರ್ಥವನ್ನೂ ಐವತ್ತೇ ಪದ್ಯಗಳಲ್ಲಿಯೂ ಮುಕ್ತಾಯಗೊಳಿಸಿರುವುದರಲ್ಲಿ ಆತನ ಇಂದ್ರಿಯನಿಗ್ರಹ, ಕರ್ತವ್ಯನಿರ್ವಹಣ ಸಾಮರ್ಥ್ಯ, ಔಚಿತ್ಯಾನೌಚಿತ್ಯಜ್ಞಾನ, ಸತ್ಯಸಂಧತೆ, ಪ್ರತಿಜ್ಞಾಪಾಲನ, ಮನೋದಾರ್ಢ್ಯ, ಇತ್ಯಾದಿ ಅಖಿಲ ಅಖಂಡ ಗುಣಗಳೂ ಕಂಡುಬರುವುವು. ಒಂದೇ ಮಾತಿನಲ್ಲಿ ಹೇಳುವುದಾದರೆ ಮಹಾಕವಿ ಪುರುಷ ಸರಸ್ವತಿಯ 'ಕ. ನಾ. ಪು.'ವು

"ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಂ!"

## “ ಪರಮಾಲಂಕಾರ ಪ್ರದರ್ಶನ ಪ್ರವೀಣ ಪದ್ಮನಾಭ” ಬಿರುದಾಂಕಿತ ಪುರುಷಸರಸ್ವತಿ

‘ಕ. ಪು.’ ಬರೆದವರೇ ‘ರ. ಪ.’ ಬರೆದರೇ ಎಂಬ ಸಂದೇಹವನ್ನು ಇನ್ನೂ ಯಾರೂ ಎತ್ತದಿರುವುದು ನಮಗೆ ಸೋಜಿಗವೆನಿಸಿದರೂ, ಆ ಎರಡರ ಅಥವಾ ಎರಡ ರಲ್ಲಿ ಒಂದರ ಕರ್ತನು ‘ಕ. ನಾ. ಪು.’ವನ್ನು ಬರೆಯಲಿಲ್ಲವೆಂದು ಘಂಟಾಘೋಷ ವಾಗಿ ಹೇಳಲು ನಮಗಿರುವ ಎರಡನೆಯ ಆಧಾರವೆಂದರೆ, ‘ಕ. ನಾ. ಪು.’ದಲ್ಲಿಯೂ ಅದರ ಕರ್ತನಾದವನ ಎರಡನೆಯ ಮಹಾಕ್ಷುದ್ರಕಾವ್ಯವಾದ ‘ಹಾ. ಹ.’ದಲ್ಲಿಯೂ ಕಂಡುಬರುವ—ನಾಗವರ್ಮಾದಿ ಆಲಂಕಾರಿಕರಲ್ಲಿ ಕಂಡುಬರದ—ಅನೇಕ ನವೀನ ಅಲಂಕಾರಗಳು.

ನಮ್ಮ ಮಹಾಕವಿಗಿರುವ ಅನೇಕ ಬಿರುದುಗಳಲ್ಲಿ ಮೇಲೆ ಹೇಳಿರುವ “ಪ. ಪ್ರ. ಪ್ರ. ಪ.” ಎಂಬುದೂ ಒಂದು. ಇದನ್ನು ಕುರಿತು ವಿಪರೀತಬುದ್ಧಿಯು ಹೀಗೆ ವಿವರಿಸಿದ್ದಾನೆ :

“‘ಪರಮ’ ಎಂಬುದನ್ನು ಕೇಳಿದೊಡನೆ ಸಾಹಿತ್ಯಜ್ಞರ ಮನಸ್ಸಿಗೆ ಸಂಭವಿಸುವ ಶಬ್ದ ‘ಚರಮ’| ‘ಚರಮ’ ಎಂದರೆ ‘ಕಡೆ’ಯದು| ಕಾವ್ಯದ ‘ಕಡೆ’ಯ ಅರ್ಧ ‘ಉತ್ತರಾರ್ಧ’| ‘ಉತ್ತರ’ವಲ್ಲದ್ದು ‘ಪೂರ್ವಾರ್ಧ’| ‘ಪೂರ್ವ’ವಲ್ಲದ್ದು ‘ಅಪೂರ್ವ’| ಆದ್ದರಿಂದ ‘ಪರಮ’ ಎಂದರೆ ‘ಅಪೂರ್ವ’| ಎಂದರೆ, ಪರಮ=ಅಪೂರ್ವವಾದ ಅಲಂಕಾರಗಳನ್ನು ಪ್ರದರ್ಶಿಸುವುದರಲ್ಲಿ, ನಾಭಿಯಲ್ಲಿ ಪದ್ಮವನ್ನು ಪ್ರದರ್ಶಿಸುವುದರಲ್ಲಿ ಪ್ರವೀಣನಾದ ಪದ್ಮನಾಭನಂತೆ, ಪ್ರವೀಣನಾದನು ಯಾವನೋ ಅವನು ‘ಪ. ಪ್ರ. ಪ್ರ. ಪ.’||”

ಈ ರೀತಿಯಲ್ಲಿ ಪರಮಾಲಂಕಾರ ಪ್ರದರ್ಶನ ಪ್ರವೀಣನಾಗಿ, ತನ್ನ ‘ಕ. ನಾ. ಪು.’ದಲ್ಲಿ ಆದ್ಯಕ್ಷರನ್ಯಾಸ, ರಾಸಭಲಾಂಗೂಲ ಅರ್ಥಾತ್ ರಜಕರಹಸ್ಯ, ತಾಲೀ ಬುಲಾಕುನ್ಯಾಯ, ವ್ಯರ್ಥ ಎಂಬ ನಾಲ್ಕು ಪರಮಾಲಂಕಾರಗಳನ್ನು ಪ್ರದರ್ಶಿಸಿದ ಪುರುಷ ಸರಸ್ವತಿಯು ‘ಹಾ. ಹ.’ದಲ್ಲಿ ಕೂಡ ಅಂತಹದೇ ಹನ್ನೊಂದು ಪರಮಾಲಂಕಾರ ಗಳನ್ನು ಪ್ರದರ್ಶಿಸಿರುವುದನ್ನೂ, ಇಂತಹ ಯಾವ ಅಲಂಕಾರಗಳೂ ‘ಕ. ಪು.’, ‘ರ. ಪ.’ಗಳಲ್ಲಿ ಕಂಡುಬರುವುದಿಲ್ಲವೆಂಬುದನ್ನೂ ವಾಚಕರು ಗಮನಿಸಬೇಕಾಗಿ ವಿನಂತಿ.

## “ಹಾರ್ಮೋನಿಯಂ ಹರಣ”ದಲ್ಲಿ ಪ್ರಯೋಗಿಸಿರುವ ಪನ್ನೊಂದು ಪರಮಾಲಂಕಾರಗಳು

೧. **ಸತಿಪತಿಸಮಾನಸ್ಥಾನಾಲಂಕಾರ** (ಪದ್ಯ ೬)—ಸತಿಪತಿಯರಿಗೆ ಸಮಾನಸ್ಥಾನವು ಸಲ್ಲಬೇಕೆಂಬ ತತ್ವದ ಪ್ರಕಾರ, ಗಂಡನಿಂದ ಹೆಂಡತಿಗೆ ಹೆಸರು ಬರಬಹುದಾದರೆ ಆ ಹೆಂಡತಿಯಿಂದ

ಅದೇ ಗಂಡನಿಗೂ ಹೆಸರು ಬರಬಹುದೆಂಬ ನ್ಯಾಯದ ಪ್ರಕಾರ, ಅಕಾರಾಂತನಾದ 'ಶಿವ'ನಿಂದ ಅವನ ಹೆಂಡತಿಗೆ ಎಕಾರಾಂತ 'ಶಿವೆ' ನಾಮಕರಣವಾದಂತೆ ಎಕಾರಾಂತ 'ಗಿರಿಜೆ'ಯ ಗಂಡನನ್ನು ಅಕಾರಾಂತ 'ಗಿರಿಜ'ನೆಂದು ಸಂಬೋಧಿಸಿರುವುದೇ ಈ ಪರಮಾಲಂಕಾರವು. ಇದನ್ನು ಪಾಮರರು "ಅಮ್ಮಾವ್ರ ಗಂಡಾಲಂಕಾರ"ವೆನ್ನುವರು.

೨. **ಟವರ್ಗ ಪ್ರಥಮಾಕ್ಷರ ದ್ವಿತ್ವ ಪಂಚದಶಾಲಂಕಾರ** (ಪದ್ಯ ೭)—ವಿವಿಧಸ್ವರ ಸಹಿತವಾದ ಟಕಾರಕ್ಕೆ ಟಒತ್ತು ಕೂಡಿದುದು ಒಂದು ಷಟ್ಪದಿಯಲ್ಲಿ ಹದಿನೈದು ಬಾರಿ ತಲೆದೋರಿದರೆ ಈ ಅಲಂಕಾರವೆನ್ನಿಸುತ್ತದೆ.

೩. **ಸ್ತಸ್ಥಪ್ರಾಸಾಲಂಕಾರ** (ಪದ್ಯ ೮)—ಷಟ್ಪದಿಯ ಪ್ರಾಸಸ್ಥಾನದಲ್ಲಿ ೧, ೨, ೪, ೫ ನೆಯ ಪಾದಗಳಲ್ಲಿ 'ಸ್ತ'ಕಾರವೂ ೩, ೬ನೆಯ ಪಾದಗಳಲ್ಲಿ 'ಸ್ಥ'ಕಾರವೂ ಬರಲು ಈ ಅಲಂಕಾರವಾಗುವುದು.

೪. **ಪರಪಂಕ್ತಿ ಪ್ರಾರಂಭಾಲಂಕಾರ** (ಪದ್ಯ ೧೦)—ಒಬ್ಬ ಕವಿಯ ಒಂದು ಪಂಕ್ತಿಯಿಂದ ಬೇರೊಬ್ಬ ಕವಿಯು ತನ್ನ ಪಂಕ್ತಿಯನ್ನು ಪ್ರಾರಂಭಿಸುವ ಈ ಅಲಂಕಾರಕ್ಕೆ ರಾಘವಾಂಕನ "ನಡೆವರೆಡಹದೆ" ಎಂದು ಮೊದಲಾಗುವ ಪದ್ಯ ನೋಡಿ.

೫. **ತ್ರಿತ್ರತ್ರಿತ್ರಿ ಪ್ರಾಸಾಲಂಕಾರ** (ಪದ್ಯ ೧೪)—ಮೇಲಿನ ಮೂರನೆಯ ಅಲಂಕಾರದಂತೆ ಪ್ರಾಸಸ್ಥಾನದಲ್ಲಿ ಮೂರು ತ್ರಿಕಾರಗಳನ್ನೂ ಮೂರು ತ್ರಕಾರಗಳನ್ನೂ ಪ್ರಯೋಗಿಸುವುದು.

೬. **ಮೌನಮಾರ್ತಾಂಡ ಮಹಾಲಂಕಾರ** (ಪದ್ಯ ೧೬)—ಯೆಂಕಳ ತಾಯಿಯನ್ನು ಈಯೊಂದು ಪದ್ಯದ ಮೊದಲ ಪಾದದ ಕೊನೆಯಲ್ಲಿ ಮಾತ್ರ ಸ್ಮರಿಸಿ, ಕಾವ್ಯದ ಉಳಿದೆಡೆಯಲ್ಲೆಲ್ಲ ಆಕೆಯ ವಿಷಯದಲ್ಲಿ ಕವಿಯು ಮೌನವನ್ನು ಅವಲಂಬಿಸಿರುವುದರಿಂದ ಈ ಅಲಂಕಾರಕ್ಕೆ ಈ ಹೆಸರು ಬಂದಿದೆ.

೭. **ತವರ್ಗ ತೃತೀಯಾಕ್ಷರ ದ್ವಿತ್ವ ದಶಕಾಲಂಕಾರ** (ಪದ್ಯ ೧೭) ಮೇಲಿನ ಎರಡನೆಯ ಅಲಂಕಾರದಂತೆ ವಿವಿಧ ಸ್ವರ ಸಹಿತನಾದ ದಕಾರಕ್ಕೆ ದಒತ್ತು ಕೂಡಿದುದು ಒಂದು ಷಟ್ಪದಿಯಲ್ಲಿ ಹತ್ತು ಸಲ ಕಾಣಿಸಿಕೊಂಡರೆ ಈ ಅಲಂಕಾರವೆನಿಸುತ್ತದೆ.

೮. **ಏಕಜೀವ ದೇಹದ್ವಯ ನ್ಯಾಯಾಲಂಕಾರ** (ಪದ್ಯ ೩೯)—'ಮೈಯೆರಡು ತಾನುಸಿರೊಂದೊ' ಎಂಬಂತೆ ಗೊರಕೆಬಿಡುವುದು 'ಏಕಜೀವ ದೇಹದ್ವಯ ನ್ಯಾಯ.' ತನ್ನ್ಯಾಯವನ್ನು ಬಳಸಿದ ಅಲಂಕಾರವು ತನ್ನ್ಯಾಯಾಲಂಕಾರವು.

೯. **ಊನಾಲಂಕಾರ** (ಪದ್ಯ ೪೧)—ಐವತ್ತು ಷಟ್ಪದಿಗಳನ್ನು ಮೀರುವುದಿಲ್ಲವೆನ್ನುವುದಕ್ಕಾಗಿಯೇ ಐವತ್ತರಲ್ಲಿ ಒಂದು ಷಟ್ಪದಿಯನ್ನು ಊನಮಾಡಿಕೊಳ್ಳುವುದು 'ಊನಾಲಂಕಾರ'ವು.

೧೦. **ಶೂದ್ರಶ್ರೋತ್ರಿಯ ನ್ಯಾಯಾಲಂಕಾರ** (ಪದ್ಯ ೪೨)—ಅಶ್ಲೀಲವನ್ನು ಆಚಾರವೆಂದು ಬಹಿರಂಗದಲ್ಲಿ ಬೋಧಿಸುವ ಶ್ರೋತ್ರಿಯರು ಮನೆಗೆಲಸದ ಶೂದ್ರನೂ ಕೇಳಲಾರದೆ ಕಿವಿ ಮುಚ್ಚಿಕೊಳ್ಳುವಂತಹ ಅಶ್ಲೀಲವನ್ನು ಒಳಮನೆಯೊಳಗಾಡುವುದು 'ಶೂದ್ರಶ್ರೋತ್ರಿಯ ನ್ಯಾಯ'. ಮೇಲಿನ ಎಂಟನೆಯ ಅಲಂಕಾರದಂತೆ ತನ್ನ್ಯಾಯ—ತನ್ನ್ಯಾಯಾಲಂಕಾರ.

೧೧. **ಸಂದೇಹ ಸಂದೋಹಾಲಂಕಾರ** (ಪದ್ಯ ೪೯)—ಸಂದೇಹಗಳ ಸಂದೋಹಗಳನ್ನು ಸಾಲಿಡಿಸುವುದು ಇದೊಂದು ಪರಮಾಲಂಕಾರ.

## "ಕರ್ಣಾಟಕ ಪುರಾಣ"ದ ಕಾಲ ನಿರ್ಣಯ

'ಕ. ಪು.', 'ರ. ಪ.'ಗಳ ಕರ್ತನು 'ಕ. ನಾ. ಪು.'ವನ್ನು ಬರೆದವನಲ್ಲವೆಂಬುದಕ್ಕೆ ಇರುವ ಇನ್ನೊಂದು ಅಗಾಧವಾದ ಸಾಕ್ಷಿಯೆಂದರೆ 'ಕ. ನಾ. ಪು.'ವನ್ನು ಬರೆದ ಕಾಲ. 'ಕ. ನಾ. ಪು.'ದ ಕಡೆಯ ಪದ್ಯ ಹೀಗಿದೆ:

ಶಾಂತವಾಗಲಿ ನಮ್ಮ ಜನ ಸಿರಿ |
ಕಾಂತನೊಲಿಯಲಿ ನೆಲಸಿ ನಿಲಲಿ ನಿ |
ತಾಂತ ಮೀ ಕರ್ಣಾಟಕವು ಸಹಣತ್ವವಾಗಿಯೆ ತಾ ||
ಕ್ರಾಂತಿಕಾರಕನಲ್ಲ ನಾ ವಿ |
ಭ್ರಾಂತಿಗೊಂಡವನಲ್ಲಲಾ ವಿ |
ಶ್ರಾಂತಿಗೊಳುವೆನು ಮುಗಿಯಿತೀ ಶತಕಾರ್ಧಷಟ್ಪದವು ||

ಇದರಿಂದ ಈ ಶತಕಾರ್ಧಷಟ್ಪದ ಮುಗಿದ ಕಾಲವು ಆರು ಪಾದಗಳಲ್ಲಿ ನಿರ್ಣಯವಾಗುತ್ತದೆ. ಹೇಗೆಂದರೆ:

(೧) ಶಾಂತವಾಗಲಿ ನಮ್ಮ ಜನ:—

ಶಾಂತ—ರಸಗಳಲ್ಲಿ ಒಂಬತ್ತನೆಯದು ∴ ಶಾಂತ=9.
ವಾಗಲಿ—ವಾ-ಗ-ಲಿ—ಮೂರು ಅಕ್ಷರ ∴ ವಾಗಲಿ=3.
ನಮ್ಮ—ನ-ಮ್ಮ—ಎರಡಕ್ಷರ ∴ ನಮ್ಮ=2.
ಜನ—ಅನಿರ್ದಿಷ್ಟ ಸಂಖ್ಯೆ ∴ ಜನ=0.
∴ ಶಾಂತವಾಗಲಿ ನಮ್ಮ ಜನ=9320.

(೨) ಸಿರಿಕಾಂತನೊಲಿಯಲಿ ನೆಲಸಿ ನಿಲಲಿ ನಿತಾಂತ:—

ಸಿರಿಕಾಂತ—ತ್ರಿಮೂರ್ತಿಗಳಲ್ಲಿ ಎರಡನೆಯವನು ∴ ಸಿರಿಕಾಂತ=2.

ನೊಲಿಯಲಿ—ಅರ್ಥಾತ್ ನುಲಿಯಲಿ. (ಕೊಡು—ಕುಡು, ಸೊಂಡಿಲು—ಸುಂಡಿಲು, ತೊಡು—ತುಡು, ಒಳ್—ಉಳ್ ಮುಂತಾದುವನ್ನು ಹೋಲಿಸಿರಿ)—ನುಲಿಯುವುದು ಯಾವುದು? ಹೊಟ್ಟೆ—ಹೊಟ್ಟೆ ಎಂದರೆ? ಕರುಳು—ಎಂದರೆ ಸಣ್ಣ ಕರುಳು, ದೊಡ್ಡ ಕರುಳು—
∴ ನೊಲಿಯಲಿ=2.

ನೆಲಸಿ ನಿಲಲಿ—ಸ್ಥಿರವಾಗಿ ಮೇರುವಿನಂತೆ ನಿಲ್ಲಲಿ—ಮೇರುವು ಅಸದೃಶವಾದ ಪರ್ವತ—
∴ ನೆಲಸಿ ನಿಲಲಿ=1.

ನಿತಾಂತ—ಸದಾ—ಕೊನೆ ಮೊದಲುಗಳಿಲ್ಲದೆ—ಚಕ್ರದಂತೆ ∴ ನಿತಾಂತ=0.

∴ ಸಿರಿಕಾಂತ ನೊಲಿಯಲಿ ನೆಲಸಿ ನಿಲಲಿ ನಿತಾಂತ=2210.

(೩) ಮೀ ಕರ್ಣಾಟಕವು ಸಹ ಣತ್ವವಾಗಿಯೆ ತಾ:

ಸಹ—ಕೂಡುವುದು—ಮೇಲೆ ಬಂದ ಎರಡು ಸಂಖ್ಯೆಗಳನ್ನೂ ಕೂಡುವುದು—
∴ 9320+2210=11530.

(೪) ಕ್ರಾಂತಿಕಾರಕನಲ್ಲ ನಾ:—

ಕ್ರಾಂತಿ—ಏರಿಕೆಳಗು ಮಾಡುವುದು—ಯಾವುದನ್ನು? ಮೇಲೆ 'ಸಪ' ಮಾಡಿಬಂದದ್ದನ್ನು.

∴ 11530×ಕ್ರಾಂತಿ=03511=3511.

(೫) ವಿಭ್ರಾಂತಿಗೊಂಡವನಲ್ಲಲಾ :—

ವಿಭ್ರಾಂತಿ—ಭ್ರಾಂತಿ—ಸಮಾನಾರ್ಥಕ—ಹೇಗೆ ಬಂತು? ಮೊದಲ ಅಕ್ಷರ ನಾಶಮಾಡಿದ್ದರಿಂದ ∴ ಮೊದಲ ಸಂಖ್ಯೆ ನಾಶಮಾಡಿದರೆ ಉಳಿಯುವುದು—3511ನಲ್ಲಿ 3 ತೆಗೆದರೆ—511.

(೬) ವಿಶ್ರಾಂತಿಗೊಳುವೆನು ಮುಗಿಯಿತೀ ಶತಕಾರ್ಥಷಟ್ಪದವು :—

ವಿಶ್ರಾಂತಿ—ಲೆಕ್ಕಾಚಾರ ನಿಲ್ಲಿಸುವುದು.

∴ ಕಡೆಗೆ ಉಳಿದದ್ದು—511.

∴ ಶಕ 511 ರಲ್ಲಿ "ಮುಗಿಯಿತೀ ಶತಕಾರ್ಥ ಷಟ್ಪದವು"[1]

ಇದರಿಂದ ಒಂದು ಮಹತ್ವದ ವಿಷಯ ಸಿದ್ಧವಾಗುತ್ತದೆ. ಇದುವರೆಗೂ ಒಂಭತ್ತನೆಯ ಶತಮಾನದ ನೃಪತುಂಗನ "ಕವಿರಾಜಮಾರ್ಗ"[2] ವನ್ನು ಬಿಟ್ಟರೆ ಬೇರೆ ಯಾವ ಗ್ರಂಥವೂ ಉಪಲಬ್ಧವಾಗಿರಲಿಲ್ಲ. ಈಗ ಅದಕ್ಕಿಂತ ಮೂರು ಶತಮಾನ ಮುಂಚಿನ ಆರನೆಯ ಶತಮಾನದ ಕಡೆಯ ಮಹಾಕ್ಷುದ್ರಕಾವ್ಯವೊಂದು ಬೆಳಕಿಗೆ ಬಂದಂತಾಯಿತು. ಜೈನನಾದ ನೃಪತುಂಗನಿಗಿಂತ ಮೂರು ಶತಮಾನ ಹಿಂದಿನ ಕಾವ್ಯವಾದ 'ಕ. ಸಾ. ಪು.'ವನ್ನು ಬರೆದ ಈ ಕವಿಯು ಬೌದ್ಧನಾಗಿದ್ದಿರಬಹುದೆಂಬ ನಮ್ಮ ಸಂಶಯವನ್ನು ಇಲ್ಲಿ ಸಾಕ್ಷೀಕರಿಸಿ ಸ್ಥಿರಪಡಿಸಲು ಸ್ಥಳಸಂಕೋಚದಿಂದಲೂ ಅಪ್ರಸ್ತುತವಾಗಬಹುದೆಂಬ ಮನಸ್ಸಂಕೋಚದಿಂದಲೂ ನಾವು ಹಿಂದೆಗೆದಿದ್ದೇವೆ.

## ಪಂಚ ಸಂಪಾದಕರ ಪ್ರಚಂಡ ಪ್ರತಿಜ್ಞೆ

'ಕ. ಸಾ. ಪು.'ವನ್ನು ಬರೆದವನು ಆರನೆಯ ಶತಮಾನದ ಪುರುಷಸರಸ್ವತಿಯೇ ಎಂಬುದಕ್ಕೆ ಆಧಾರಗಳು ಇಷ್ಟು ಬಲವತ್ತರವಾಗಿರುವಾಗ, 'ಕ. ಪು.' 'ರ. ಪ.'ಗಳ ಕರ್ತನಾದ ಇಂದಿನವನು ಈ ಗ್ರಂಥವನ್ನು ಬರೆದನೆಂದು ಹೇಳಲು ಬಾಯಾದರೂ ಹೇಗೆ ಬಂದೀತು? 'ಕ. ಪು.', 'ರ. ಪ.' ಎರಡನ್ನೂ ಬರೆದಿರಬಹುದಾದ ಶ್ರೀಮಾರ್ಗರಾಜರತ್ನರು ಈ 'ಕ. ಸಾ. ಪು.'ವನ್ನು ಬರೆದರೆಂಬ ವಾದವು ಕೇವಲ ಹಾಸ್ಯಾಸ್ಪದ

---

[1] ಈ ಕಾವ್ಯವು ಪಂಪನಿಗಿಂತ ಪ್ರಾಚೀನವೆಂಬುದಕ್ಕೆ 'ಕ. ಸಾ. ಪು.'ದ ೩೮ ಮತ್ತು ೪೧ನೆಯ ಪದ್ಯಗಳ ಅಡಿಟಿಪ್ಪಣಿ ನೋಡಿ.

[2] 'ಕವಿರಾಜ ಮಾರ್ಗ'ದಲ್ಲಿ 'ತ್ರಿಪದಿ'ಯನ್ನು ಹೆಸರಿಸುವ ನೃಪತುಂಗನು, ಪುರುಷ ಸರಸ್ವತಿಯ ಯಾವುದಾದರೂ 'ಷಟ್ಪದಿ'ಯ ಮೂರು ಪಾದಗಳು ಮಾತ್ರ ಉಪಲಬ್ಧವಾಗಿ, ಅದನ್ನೇ 'ತ್ರಿಪದಿ'ಯೆಂದು ಭ್ರಮಿಸಿದ್ದಾನೊ!

ವಾದದ್ದು. ದಂಡೆಗಳಲ್ಲಿ ಪಂಡಿತನಾದವನು ದಂಡಕ ಬರೆಯುವುದು, ವ್ಯಾಯಾಮ ವಿಶಾರದನು ವ್ಯಾಕರಣಪಟುವಾಗುವುದು, ಸಪ್ಪಟ್ಟು ಶಿಕ್ಷಕನು ಷಟ್ಪದಿ ಬರೆಯುವುದು, ಕುಸ್ತಿ ಕಲಿಸುವವನು ಕಂದ ಕಟ್ಟುವುದು, 'ಕ. ಪು.' 'ರ. ಪ.'ಗಳ ಕರ್ತನು 'ಕ. ನಾ. ಪು.'ವನ್ನು ರಚಿಸುವುದು—ಈ ಮುಂತಾದುವು ರೋಮನ್ ರಿಂಗ್ಲಿನ ರುಸ್ತುಂ ಕೈಯಿ ರಾಮಾಶ್ವಮೇಧ ಬರೆದಂತೆ ಮೊಲದ ಕೊಂಬು, ಮರಳ ತುಪ್ಪ!

ಈಗಲೂ ಒಂದು ಮಾತು. ಪುರುಷಸರಸ್ವತಿಯ 'ಕ. ನಾ. ಪು.'ವನ್ನು 'ಕ. ಪು.', 'ರ. ಪ.'ಗಳ ಕರ್ತರೇ ಬರೆದುದು ಸತ್ಯವಾದರೆ, (ಅದು ಹೇಗಾದೀತು?) ಅದೇ ಮಹಾಕವಿಯ—ಈಗ ಪ್ರಕಟಿಸಿರುವ 'ಹಾ. ಹ.'ವನ್ನು ಬಿಟ್ಟು ಉಳಿದ—(೧) ಬೈರಿಗೇಂದ್ರ ಭಯಾನಕವು ಅಥವಾ ಭಯಂಕರ ಬೃಹದ್ಬೈರಿಗೇಶ್ವರ ಮಹಾಪುರಾಣವು, (೨) ಛೀರಾಮ ಚರಿತವು ಅಥವಾ ಶಾರದಾ ಸ್ವಯಂವರವು, ಮತ್ತು (೩) ದಶಕಾರ್ಧ ಕುಮಾರ ಚರಿತವು—ಎಂಬ ಮೂರು ಗ್ರಂಥಗಳನ್ನು ಆ 'ಕ. ಪು.', 'ರ. ಪ.'ಗಳ ಕರ್ತರು ತಾವೇ ಪ್ರಕಟಿಸಲಿ. ಇಲ್ಲದಿದ್ದರೆ, ಈ ಮಹಾಕ್ಷುದ್ರಕಾವ್ಯಗಳು ತಮ್ಮವು ಅಲ್ಲವೆಂದು ಒಪ್ಪಿಕೊಳ್ಳಲಿ!

ಅದಕ್ಕಾಗಿ ಇನ್ನು ಆರು ತಿಂಗಳ ಕಾಲ ನಾವು ಪುರುಷಸರಸ್ವತಿಯ ಯಾವ ಕಾವ್ಯವನ್ನೂ ಪ್ರಕಟಿಸುವುದಿಲ್ಲವಾಗಿ ಪ್ರತಿಜ್ಞೆಮಾಡಿದ್ದೇವೆ. ಆದರೆ, ಪುರುಷ ಸರಸ್ವತಿಯ ಮೇಲೆ 'ಕ. ಪು.' 'ರ. ಪ.'ಗಳ ಕರ್ತರ (ಮಿತ್ರರು ಹಾಗೂ ಅವರೂ) ನಡೆಸುತ್ತಿರುವ ಅಸಹ್ಯ ಅಪಪ್ರಚಾರವನ್ನು ಎದುರಿಸುವುದಕ್ಕಾಗಿ, ನಾವುಗಳು ಮುಂದಿನ ತಿಂಗಳ ಮೊದಲಿನಲ್ಲಿ "**ಸನಾತನ ಸಾರಾಸಾರ ಸರ್ವಾಚಾರ ಸಂರಕ್ಷಕ**"ರೆಂಬ ಅಪರಾಖ್ಯೆಯ "**ಹಾಳೂರಿನ ಹಳೆಯ ಹುಲಿಗಳ**" ಸಾಹಿತ್ಯ ಶಾಖೆಯ ಆಶ್ರಯದಲ್ಲಿ **ಮಹಾಕವಿ ಪುರುಷಸರಸ್ವತಿಯ** ಜಯಂತಿಯನ್ನು ಆಚರಿಸಲು ನಿರ್ಧರಿಸಿದ್ದೇವೆ. ಅದೇ ಸಮಯದಲ್ಲಿ "**ಪುರುಷಸರಸ್ವತಿ ಪ್ರಶಸ್ತಿ**" ಅಥವಾ "**ಅನಿರೀಕ್ಷಿತ ಅನಪೇಕ್ಷಿತ ಅನಾಮಕ ಅನೇಕಾಭಿಪ್ರಾಯ ಸಂಗ್ರಹ**"ವೆಂಬ ಸತ್ಕವಿಯ ಸ್ಮಾರಕ ಸಂಪುಟವನ್ನೂ ಪ್ರಕಟಿಸಬೇಕೆಂದು ತೀರ್ಮಾನಿಸಿದ್ದೇವೆ. ಈ ಸಂಪುಟಕ್ಕೆ ನಾವು ಯಾವ ಅಭಿಪ್ರಾಯಗಳನ್ನೂ ಅಪೇಕ್ಷಿಸುವುದಿಲ್ಲ, ನಿರೀಕ್ಷಿಸುವುದೂ ಇಲ್ಲ. ಆದರೆ ಬರುವ ಅಭಿಪ್ರಾಯಗಳೆಲ್ಲವೂ ಅನಾಮಕವಾಗಿರಬೇಕೆಂಬ ನಿಯಮವನ್ನು ಸಂಪುಟದಲ್ಲಿ ಸಹಕರಿಸಿ ಪ್ರೋತ್ಸಾಹಿಸುವವರೆಲ್ಲರೂ ಗಮನಿಸಬೇಕಾಗಿ ವಿನಂತಿ.

ಇಂತು

ಸಿರಿಗನ್ನಡಿಗರ ಡಿಂಗರಿಗರು

"ಗುಪ್ತ ಸಂಪಾದಕ ಪಂಚಕ."

## "ಹಾರ್ಮೋನಿಯಂ ಹರಣ"ದ ವಸ್ತುಪರಿಚಯ

ಈ ಶತಕಾರ್ಧ ಷಟ್ಪದಿಯ ಐದು ದಶಕಗಳಲ್ಲಿ ರಚಿತವಾಗಿದೆ. ಇದು ಒಂದೇ ಒಂದು ಪ್ರತಿ ದೊರಕಿದೆ. ಆದ್ದರಿಂದ ಪಾಠಾಂತರಗಳಿಲ್ಲ. ಇದಕ್ಕೆ ವಿಪರೀತ ಬುದ್ಧಿ ವ್ಯಾಖ್ಯಾನ ಬರೆದಿಲ್ಲ.

**ಮೊದಲನೆಯ ದಶಕ:** ಕವಿಯು ತ್ರಿಮೂರ್ತಿಗಳನ್ನು ಸ್ಮರಿಸಿ (೧), ತನ್ನ ಸಂಪ್ರದಾಯ ಪ್ರೇಮವನ್ನರುಹಿ (೨), ಸ್ವಪ್ರಶಂಸೆಯನ್ನೂ (೩-೬) ವಾಚಕ ನಿಂದೆಯನ್ನೂ (೭-೧೦) ಸಾಂಗವಾಗಿ ನೆರವೇರಿಸುತ್ತಾನೆ.

**ಎರಡನೆಯ ದಶಕ:** ದೇವತಾಪ್ರಾರ್ಥನೆ (೧೧)—ಬೈಲೂರ ವರ್ಣನೆ (೧೨, ೧೩)—ವೆಂಕಟಾರ್ಯರು ವೆಂಕಟೇಶ ವರದಿಂದ ವೆಂಕುವನ್ನು ಪಡೆದದ್ದು (೧೪-೧೫)—ಆಕೆಗೆ ವಯಸ್ಸಾಗಲು ಗಾಂಧರ್ವ ವಿದ್ಯೆಗೆ ಶಿಷ್ಯಯಿಸಿದ್ದು (೧೬)—ಅವರ ಸಂಗೀತ ಸಮರ ಕೋಲಾಹಲ (೧೭-೨೦).

**ಮೂರನೆಯ ದಶಕ:** ಪಕ್ಕದ ಮನೆಯಲ್ಲಿ ಪರೀಕ್ಷೆಗೆ ಓದುತ್ತಿದ್ದ ಸಿಂಗನೆಂಬ ನಾಯಕನ ಪ್ರಾರ್ಥನೆ (೨೧-೨೫), ಅದರ ನಿರಾಕರಣೆಗಾಗಿ ನಾಯಕ ಸಿಂಗನ ಪ್ರಲಾಪ (೨೬-೨೯)—ಹಾರ್ಮೋನಿಯಮ್ಮನ್ನು ಕದಿಯಲು ನಾಯಕನ ನಿರ್ಧಾರ (೩೦).

**ನಾಲ್ಕನೆಯ ದಶಕ:** ಸಿಂಗನು ರಾತ್ರಿಯಾಗುವುದನ್ನು ಕಾಯುತ್ತಿದ್ದುದು (೩೧-೩೮)—ಸಿಂಗನ ಗೃಹಪ್ರವೇಶ (೩೯)—ಸಿಂಗ ನಿರ್ಬಂಧನ (೪೦).

**ಐದನೆಯ ದಶಕ:** ಕವಿಯ ಪ್ರತಿಜ್ಞೆ (೪೧)—ನಾಯಕನನ್ನು ಶಿಕ್ಷಿಸಿದ್ದು (೪೨-೪೭)—ಸಿಂಗ ನಿರ್ಧಾರವನ (೪೮)—ಕವಿಯ ಸಂದೇಹ ಸಂದೋಹ (೪೯)—ಕಾವ್ಯಸಮಾಪನ* (೫೦).

---

* ಈ ಪದ್ಯದಲ್ಲಿ ಕವಿಯು ತನಗೆ ತ್ರಿಮೂರ್ತಿಗಳಲ್ಲಿರುವ ಸಮಾನವಾದ ಪೂಜ್ಯಭಾವವನ್ನು ವ್ಯಕ್ತಗೊಳಿಸಿದ್ದಾನೆ. ಯಾವ ಕ್ರಮದಲ್ಲಿ ಹೇಳಿದರೂ ತ್ರಿಮೂರ್ತಿಗಳಲ್ಲಿ ಒಬ್ಬನ ಹೆಸರು ಮಾತ್ರ ಮೊದಲು ಬರುವುದರಿಂದ, ಒಬ್ಬನನ್ನು 'ಮೊದಲಿ'ನಲ್ಲೂ ಇನ್ನೊಬ್ಬನನ್ನು 'ಪ್ರಾರಂಭ'ದಲ್ಲೂ ಉಳಿದವನನ್ನು 'ಆದಿ'ಯಲ್ಲೂ ಸ್ಮರಿಸಿ, ಇಂಗ್ಲಿಷಿನಲ್ಲಿ ಹೇಳುವಂತೆ ಮೂವರನ್ನೂ 'Bracket' ಮಾಡಿದ್ದಾನೆ.

# ಹಾರ್ಮೋನಿಯಂ ಹರಣವು*

ಅರ್ಥಾತ್

## ವೆಂಕಟೇಶ ಹಗರಣವು

ಅಥವಾ

## ನಿಂಗ ನಿರ್ಯಾಣವು

ಎಂಬ

ಹಾರ್ಮೋನಿಯಮ್ಮನ್ನು ಹರಣಮಾಡಲು ಹೋದವನ
ಹರಣವು ಹರಣವಾದ
ಹ(ಗ)ರಣವು

### ಪೀಠಿಕಾ ಪ್ರಕರಣವೆಂಬ ಮೊದಲ ದಶಕವು

ಶ್ರೀ ಗಿರಿಜೆ ಸರಸತಿಯರೊಲಿದೆನ
ಗೀಗೆ ಸನ್ಮಂಗಳವನೀ ಕೃತಿ
ಗಾಗಿಯೊಲಿಸುತೆ ಹರಿಯ ಹರನ ಹಿರಣ್ಯಗರ್ಭರನು |
ಮೂಗುಬೆರಳಿನ ಜನರು ನೆರೆ ತಲೆ
ದೂಗುವಂತಿರೆ ನುಡಿಯ ನಡಸುತೆ
ಲಾಗಿನಲಿ ಹಾರ್ಮೋನಿಯಂ ಹರಣವನು ಬಣ್ಣಿಪೆನು ||೧||

ಶರಣನಾಗಿಯೆ ಸಂಪ್ರದಾಯಕೆ
ನರ ನಿಲಿಂಪರ ಪದವ ವೈಶ್ವಾ
ನರನ ತೇಜವ ಪಡೆದನಮೃತತ್ವದ ರಹಸ್ಯವನು |
ಮರಣಭಯವನು ದಾಟಿ ಸಾಕ್ಷಾತ್
ಪರಮಪದವನು ಪಡೆಯಲೋಸುಗ
ಮೆರೆವೆ ಕವಿವಾಚಕರ ಬಳಕೆಯ ನುತಿಯ ನಿಂದೆಗಳ ||೨||

---

* 'ಹಾ. ಹ.' 'ಕ. ನಾ. ಪು.'ಗಳಂ ತಾ |
ನೋಹೋ ಪುರುಷಸರಸ್ವತಿ ರಚಿಸಿದ ಬಳಿಕಾ ||
ದೇಹವನಚಿರವನುಳಿದಾ |
ಸಾಹಸಿ ನಿಂಗನೊಲಮರರ ಪದಕ್ಕೆ ಸಂದಾ ||

(ಹಾಳೂರಿನ ಹುಲ್ಲುಗುಡ್ಡೆ ಶಾಸನ, ೩೭.)

ಸೆಸುನಲಿ ನಾ ಪುರಿಸಸರಸತಿ
ಹಸುರು ಹುಲ್ಲಿನ ಮೇಲೆ ಮಂಜಿನ
ಕುಸುರಿಕೆಲಸದ ಕುಶಲಕರ್ಮದ ಸೊಣವು ನಯಗಾರ |
ಮುಸೆದಹಲ್ಲಿನದೆರಡುಹಿಡಿ ಗರ
ಗಸದ ಕುಯಿತವನಾರ್ಪುದಲ್ಲದೆ
ರಸರಸಾಂತರಗಳನು ಬಣ್ಣಿಸಬಲ್ಲುದೆನ್ನಳವು ||೩||

ಪುರುಷನಾಗಿ ಸರಸ್ವತಿಗೆ ತಾ
ವರೆಯ ಮನೆಯಲಿ ಜನಿಸಿ ಪಳವಾ
ತೋ[1]ರೆದು ಲೋಕವ ಪೊರೆದ ಲಕ್ಷ್ಮೀರಮಣನಣುಗನೊಲು |
ಪುರುಷಸರಸತಿಯೆನಿಸಿ ತಾವರೆ
ಪುರದ ಬಸಿರಲಿ ಜನಿಸಿ ಪಳವಾ
ತೊ[2]ರೆದು ಕಬ್ಬವ ಬರೆದ ಲಕ್ಷ್ಮೀರಮಣಸುತನಾನು[3] ||೪||

ವೇದ ಮಂದರ ಮೇದಿನಿ ಪ್ರ
ಹ್ಲಾದ ಬಲಿ ಮೊದಲಾದವರ ಸೆರೆ
ಕಾದ ತನ್ನೈದಾದಿಯವತಾರದಲಿ ಬಿದ್ದವರ |
ಉದ್ಧರಿಸಿ ಮಲೆತವರ ತಾ ತೆಗೆ
ದೊದ್ದ ಹರಿಯಂತೆದ್ದು ಮೂಲೆಗೆ
ಬಿದ್ದ ಹಳೆಯುದನುದ್ಧರಿಸುವೆನು ಹೊಸದ ತೆಗೆದೊದ್ದು ||೫||

ಮೂರುಕಣ್ಣಿನ ಮೂರುಶೂಲದ
ಆರುಮುಖದ ಕುಮಾರಕನ ಜಲ
ಧಾರೆ ಗಂಗಾದೇವಿ ಜಡೆಯೊಳಗಾದ ಗಿರಿಜನೊಲು |
ಮೂರು ಹೆಸರಿನ ಮೂರು ಕಾವ್ಯದ[4]
ಆರುಪಾದದ ಭಾಮಿನಿಯ ವಾ
ಗ್ಧಾರೆ ಸುಡಿಯೊಳಗಾದ ಪರ್ವತನಳಿಯ[5] ನಾನಲ್ತೆ ||೬||

---

1 ವೇದ. 2 ಹಲವು ಮಾತು. 3 ತಂದೆಯ ಹೆಸರು ಲಕ್ಷ್ಮೀಕಾಂತ ಅಥವಾ ಲಕ್ಷ್ಮೀಪತಯ್ಯ.

4 'ಕ. ಸಾ. ಪು.', 'ಹಾ. ಹ.' ಮತ್ತು 'ಬೈರಿಗೇಂದ್ರ ಭಯಾನಕ.' ಈ ಪದ್ಯದಲ್ಲಿಯ ಅಲಂಕಾರ: 'ಸತಿಪತಿ ಸಮಾನಸ್ಥಾನಾಲಂಕಾರ.'

5 ಇವನ ಮಾವನ ಹೆಸರು 'ಬೆಟ್ಟದಯ್ಯ' (?)

ಹುಟ್ಟಿದವಸುಳಿ ಕಟ್ಟಿ ಜಟ್ಟವ
ಸುಟ್ಟರೂ ಛಟ್ಟಾಗದೆಂದವ
ರಿಟ್ಟು ನುಡಿವರು ದಿಟ್ಟಮುನಿಗಳು ಕೊಟ್ಟ ಕಿವಿಗಳಿಗೆ |
ಮುಟ್ಟದೆಯೆ ರಸಘಟ್ಟಿಯುಸು ಬಲು
ಕೆಟ್ಟ ಕಾವ್ಯವಿದೆಂದು ಪೊಟ್ಟುವ
ಮುಟ್ಟುಬುದ್ಧಿಯ ಮಟ್ಟಗೆಡಹುವ ಗಟ್ಟಿಗರು ನಾವು[1] ||೭||

ಪುಸ್ತಕವ ನೆರೆಯೋದಿಯೀರ್ಷ್ಯಾ
ಗ್ರಸ್ತಮಾನಸನಾಗಿ ತದ್ದುರ
ವಸ್ಥೆಯಿಂದೊಂದೆರಡು ತಪ್ಪುಗಳಿಲಿಯ ಹುಲಿಮಾಡಿ |
ನ್ಯಸ್ತಗುಣಗಣಕೋಟಿಯುಸ್ತ
ವ್ಯಸ್ತವೆಂದರಚಾಡುವವನಾ
ಮಸ್ತಕ[3]ವೆ ಮಮ ವಾಮಚರಣಕೆ ಕಾಲುಮಣೆಯಲ್ತೆ[2] ||೮||

ನಾನೆ ಬಲ್ಲವನೆಲ್ಲ ನನ್ನ ಸ
ಮಾನೆ ಮಿಕ್ಕುಳಿದವರು ತೆಗೆಯೀ
ಮಾನವರು ಕೃತಿಕಾರರೇ ಪೇಳ್ ನಾನೆ ನಾನೆಂಬ |
ಬೋನು ಸಣ್ಣದರೊಳಗೆ ಸಿಲುಕಿದ
ಜೇನೆ ಬೆನ್ನಿನ ಮುರಿಯ ಬಾಗಿದ
ಗೂನು ಜನ್ಮಾಂತರಗಳೆನಿತರ ಹೀನಸುಳಿ ತಾನೊ ||೯||

ನಡೆವರೆಡಹದೆ ಕುಳಿತು ಕೊಳೆವವ[4]
ರೆಡಹರ್ರೈ ಕೇಳಿಡವಲಾರರು
ಕಡುಸುಲಭ ಕುಳಿತವರು ನಡೆದಾಡುವರನಣಕಿಸಲು |
ನಡುನಿಶಿಯು ಕೆಳಕುಳಿತು ತಾರಾ
ಗಡಣದಧಿಪ ಕಳಂಕಕೆಡೆಯೆಂ
ದೊಡೆದು ನುಡಿದಡೆ ಪೊಡವಿದೀಪವ ನಗದೆ ಸಕಲಜನ ||೧೦||

1 'ಟವರ್ಗ ಪ್ರಥಮಾಕ್ಷರ ದ್ವಿತ್ವ ಪಂಚದಶಾಲಂಕಾರ.'
2 'ಸ್ತಸ್ಥಪ್ರಾಸಾಲಂಕಾರ.'
3 ಅಹಂಕಾರದಿಂದ ಬಾತುಹೋದ 'ಮಸ್ತಕ.'
4 'ಸರಪಂಕ್ತಿ ಪ್ರಾರಂಭಾಲಂಕಾರ.'

## ಗಾಂಧರ್ವ ವಿದ್ಯಾ ವ್ಯಾಸಂಗವೆಂಬ ಎರಡನೆಯ ದಶಕವು

ಸಿರಿಯು ವಾಣಿಯು ಗಿರಿಜೆಯರಸರ
ಮುರಲಿ ವೇದ ಕಪಾಲಹಸ್ತರ
ವರದಕರಗಳ ಪೊರೆವ ಕರುಣಾಪಾಂಗವಿರಲೆನಗೆ |
ಹಿರಿಯ ಕವಿಗಳ ಮನೆಯ ಕಿರುಕಸ
ಬರಲು ನಾ ಯಃಕಶ್ಚಿತನು ಬಿ
ತ್ತರಿಸುವೆನು ಹಾರ್ಮೋನಿಯಂ ಹರಣದ ಕಥಾಸಕವ ||೧೧||

ಮೂರುಲೋಕದ ಮದಿಯೆ[1] ದೇವರ
ಕೇರ ನಡುವಣ ಪೀಠದೊಲು ಮೈ
ದೋರಿ ಮೆರೆಯುವ ಮರ್ತ್ಯಲೋಕದ ಭರತಭೂಮಿಯೊಳು |
ಭಾರಿಯುವಗುಣಗಳಿಗೆ ತಾನೇ
ಗೋರಿಯೆಂಬಂದದಲಿ ನೆರೆ ಬೈ
ಲೂರುಪತ್ತನವೆಸೆವುತಿರ್ದುದನೇನವೊಗಳುವೆನು ||೧೨||

ಸಾಜದಲಿ ಬೈಲೂರು ರತಿಗೆ ಮ
ನೋಜ ಮೇಣ್ಸಿರಿಸರಸತಿಗೆ ತಾ
ನೋಜ ದಾನದ ಭೂಜ ಬುಧರಿಗೆ ಭೋಜನೆಂದೆನಿಸಿ |
ತಾಜಮಹಲಿನ ಮುಂದೆ ಬಣ್ಣದ
ಗಾಜಿಯೆಂಬೀ ಸಾಮತಿಗೆ ತಾ
ಭಾಜನವು ಬೈಲೂರು ಮಿಕ್ಕಿನ ನಗರಮಾಲೆಯೊಳು ||೧೩||

ಧಾತ್ರಿಯೊಳು ಕಾವ್ಯೇಶನಿಗೆ ಸ
ತ್ಪಾತ್ರವಹ ಬೈಲೂರ ನಡುವಣ
ಸೂತ್ರಿಸಿದ ನೂರಾರು ಬೀದಿಗಳೊಂದರಂಚಿನಲಿ |
ಶ್ರೋತ್ರಿಯರು ಮೇಣ್ ಭಾರತೀಯಸ
ಗೋತ್ರಜ ಬ್ರಹ್ಮಾಂಡಗಾತ್ರರು
ವೇತ್ರಹಸ್ತರು ವೇಂಕಟಾರ್ಯರನಿಯದವರಾರು[2] ||೧೪||

---

1 'ಮಧ್ಯೆ' ಎಂಬುದರ ತದ್ಭವ.

2 'ತ್ರಿತ್ರ ತ್ರಿತ್ರಿ ಪ್ರಾಸಾಲಂಕಾರ.'

ವೆಂಕಟಾರ್ಯರು—ಮಕ್ಕಳಿಲ್ಲದ
ಸಂಕಟವೆ ಸುಡುಬೆಂಕಿಯಲ್ಲವೆ—
ಸುಂಕ[1]ಗೊಟ್ಟು ಸಮಂತು ಪಂಕಜನಾಭನನು ಭಜಿಸಿ।
ವೆಂಕಟೇಶ ವರಪ್ರಸಾದದ
ಕೊಂಕುಳಿನ ಕಿರುಗೂಸ ಪಡೆದದ
ಕೆಂಕು ನಾಮಾಂತರವನಿಟ್ಟರು ಲೋಕ ಬೆರಗಾಗೆ ||೧೫||

ವೆಂಕಟಾತ್ಮಜೆ ಯೆಂಕು ತಾಯಿಯು[2]
ಕೊಂಕುಳಂಕಗಳುಳಿದು ವಯಸನ
ವುಂಕಿ ಬೆಳೆಯಲು ಬಿಟ್ಟು ಲಂಗನ ಸೀರೆ ನಿರಿಯುಡಲು।
ವೇಂಕಟಾರ್ಯರು ಮಗಳು ವಿದ್ಯೆಯ
ಸೋಂಕನೂ ತಾನರಿಯದಿರೆ ನೆರೆ
ಭೋಂಕನೆಯೆ ನಿಶ್ಚೈಸಿದರು ಗಾಂಧರ್ವವಿದ್ಯೆಯನು ||೧೬||

ಮುದ್ದುಮಗಳಿಗೆ ಕಲಿಸಬೇಕೆಂ
ದೆದ್ದು ಪೇಟೆಯೊಳುದ್ದ ಪರಿಕಿಸಿ
ಕದ್ದುತಂದರು[3] ಸದ್ದು ಹೆಚ್ಚಿನ ಹಾರುಮೋನಿಯವ।
ನಿದ್ದೆಗಿದ್ದೆಯ ಬಿಟ್ಟು ಸಂತತ
ವೊದ್ದು ಹೊಡೆದಂತೆದ್ದ ದನಿಯಲಿ
ಖುದ್ದು ತಾವೇ ಕಲಿಸತೊಡಗಿದರಾತ್ಮಜೆಗೆ ಪದವ[4] ||೧೭||

ತಾವೆ ತಮಗಾಚಾರ್ಯರಾಗಿ ಮ
ಹಾ ವಿಲಾಸದಿ ನಾದದೇವನ
ಸೇವೆಯನು ಕೈಕೊಂಡು ಮಗಳಿಗು ಕಟ್ಟಿ ಕಂಕಣವ।
ಮೇವನರಸುವ ಕುರುಡುಕರುವಿನ
ಗೋವಿನೋಪಾದಿಯಲಿ ಕಾಣದ
ಕಾವಲನು ತಡಕಿದರು ಸಂಗೀತದ ಸಮುದ್ರದಲಿ ||೧೮||

---

1 ಪ್ರಾಸವಿಲ್ಲದಿದ್ದರೆ 'ಲಂಚ'ವೆಂಬುದು ಇನ್ನೂ ಚೆನ್ನಾಗಿ ಒಪ್ಪುತ್ತಿತ್ತು.

2 'ಮೌನಮಾರ್ತಾಂಡ ಮಹಾಲಂಕಾರ.'

3 ಮನೆಗೆ ಬರುವ ಮುಂಚೆಯೇ ಯಾರಾದರೂ ತಡೆದಾರೆಂದು ಕದ್ದು ತಂದರು.

4 'ತವರ್ಗ ತೃತೀಯಾಕ್ಷರ ದ್ವಿತ್ವ ದಶಕಾಲಂಕಾರ.'

ಕೀರ ಕಚ್ಚಿದ ಬಾಯ ಬೆಕ್ಕಿನ
ಮೋರೆಗಂಡ ಶ್ವಾನ ತನ್ನಯ
ತೋರಬಾಯನು ತೆರೆಯಲಾ ಸರ ಮೂರಸುರೆ ಮೀರ।
ಹಾರುಮುನಿಯುಂ ತಂದೆ ಮಗಳುದಿ
ರೇರುಕೂಗಿನ ಕಿರಿಚುಗೊರಲಿನ
ಸಾರಿಗಮುಗಳ ಸಮರಕೋಳಾಹಳವನೇಸೆಂಬೆ ॥೧೯॥

ಹೇಳಲೇನಿಹುದಿನ್ನ ವಂದಿರು
ಚೇಳುಕಡಿದವರೆಳೆವ ರಾಗದ
ಮೇಳದಾಲಾಪನೆಯ ಪಲ್ಲವಿ ಚರಣಗಳನೆಲ್ಲ।
ಸೋಳಯಿಸಿ ಪಾಡಿದರು ಬಿರ ಕರ
ವಾಳ ಕಿವಿವೊಕ್ಕಂತೆ ಬೀಸಿದ
ಗಾಳ ತಾಗಿದ ಮೀನಿನ ಸ್ಪಂದನವನನುಕರಿಸಿ ॥೨೦॥

## ನಿಂಗನಿರ್ಧಾರಣವು ಎಂಬ ಮೂರನೆಯ ದಶಕವು

ಆದಿಶೇಷನ ಹೆಡೆಯ ಸಾಲಿನ
ಲೈದನೆಯದರ ಪಕ್ಕದಲಿ ತಾ
ಹಾದು ಕುಳಿತ ಫಣಾಪ್ರಪಂಚದಲಾರನೆಯದರೊಲು।
ವೇದಮೂರುತಿ ವೇಂಕಟಾರ್ಯರ
ದಾದ ಮಹಡಿಯ ಮನೆಯ ಬಲಭುಜ
ತೇದು ನಿಂತಿತು ಸೌಧ ಗಗನಕೆ ನಿಮಿರಿ ತಲೆಯೆತ್ತಿ ॥೨೧॥

[1]ಅದರ ಮುಂಗಡೆ ಮಹಡಿಮೆಟ್ಟಲ
ಬದಿಯೊಳಿಪ್ಪತ್ತೊಂಬತಂಗುಲ
ಚದರವಿರಬಹುದಾದ ಕೋಣೆಯ ಪಡೆದು ಜಾಡಿಗೆಗೆ।
ತುದಿಯ ಕಾಟದ ಕಡುಪರೀಕ್ಷೆಯ
ಕದನಕೋಸುಗವರಿವಿನಗ್ನಿಗೆ
ತಿದಿಯುಸೊತ್ತುತ ಕುಟ್ಟಿ ಕಾಯಿಸುತುತ್ತರಾಸ್ತ್ರಗಳ ॥೨೨॥

---

[1] ಮಹಾಕವಿ ಪುರುಷ ಸರಸ್ವತಿಗೆ 'ಕುಳಕಪ್ರಿಯ'ಸೆಂಬ ಬಿರುದಿರುವುದನ್ನು ವಾಚಕರು ಮರೆತಿರಲಾರರು. ಇಲ್ಲಿ ಪದ್ಯ ೨೨ರಿಂದ ೨೬ರ ವರೆಗೆ ಕುಳಕದ ಹೊಳೆ ನಿರರ್ಗಳವಾಗಿ ಹರಿಯುತ್ತಿದೆ.

ಮಸೆದು ಮಸೆದು ಕ್ಷುರದ ಧಾರೆಗು
ಮಸದಳದ ನಿಶಿತತೆಯನೆಸಗುತ
ಲಸಮನಯನನ ಪೆಸರ ಬಾಲಕ ನಿಂಗನೆಂಬವನು[1] |
ಬಿಸಿಯ ಘನಘನಮಗುಡುವ ರಸಪಾ
ಯಸದ ಬಾಯಿಗೆ ಮರಳು ಧಡಭಡ
ಕುಸಿದು ಬಿದ್ದಂತೆಸೆದ ಹಾರ್ಮೋನಿಯಮಿನಸ್ವರವ ||೨೩||

ತಡೆಯಲಾರದೆ ನಡೆದು ವಿನಯದಿ
ನಡಿಯನಿಟ್ಟು ತದಾರ್ಯಭವನಕೆ[2]
ನುಡಿಯ ನಡಸಿದನಿಂತು ಹಿರಿಯರೆ ಬಲ್ಲವರಿಗಾನು |
ಬಡವನೇನೆಂದುಸಿರುವೆನು ಬಲು
ಗಡವಬೆಕ್ಕಿಗೆ ಸುಂಡ ತಾ ನಡ
ನಡುಗುವಂದದೊಳದುರಿ ಬೆದರುವೆನೆನ್ನ ಬಿನ್ನಪವ ||೨೪||

ಲಾಲಿಸಿರಿ ನನಗೇಳು ದಿನಗಳ
ಮೇಲೆ ಕಡೆಯ ಪರೀಕ್ಷೆಯದರೊಳು
ಸೋಲೆ ಸದ್ಗತಿ ಸಿಗದು ಕರುಣದಿನಲ್ಲಿವರವೊಲಿದು |
ನಿಲಿಸಿ ಸಂಗೀತವನು ಪಾಠವ
ಕಲಿಯಲನುಕೂಲಿಸಿದರೆಂದಿಗು
ಕಲಸಿ ಕೈಗಳ ಮುಗಿವೆನೆನಲವರಾಗದಾಗದೆನೆ ||೨೫||

ಕೇಳಿ ಚಿಂತಾಕ್ರಾಂತನಾದನು
ಪೇಳಿರಲೆ ಗೋಡೆಗಳೆ ಕಿಟಕಿಯೆ
ಪೇಳು ನೀನೆಲೆ ಕದವೆ ಸುತ್ತಿನ ಹರುಕು ಮುರುಕುಗಳೆ |
ಪೇಳಿ ನೀವೀತಂದೆಮಗಳುದಿ
ರೂಳುತಿರಲೆನಗೇನು ಗತಿಯಿ
ನ್ನೇಳು ದಿವಸ ಪರೀಕ್ಷೆಗಿಹುದೆಂದೊರಲಿದನು ತರಳ ||೨೬||

---

[1] ಕವಿಯು ಇಲ್ಲಿ ನಿಂಗನ ಹೆಸರನ್ನು ಹೇಳುವ ನೆಪದಿಂದ ಕೇವಲ 'ಅಸಮನಯನ'ನೊಬ್ಬನನ್ನೇ ನೆನೆದು ಹರಿವಿರಿಂಚಿಗಳನ್ನು ಬಿಟ್ಟುದು ಕವಿಯ ಶಿವಪಕ್ಷಪಾತವನ್ನು ತೋರಿಸುವುದೆಂದು ನಮ್ಮ ನಂಬಿಕೆ.

[2] ಇದು ಬೈಲೂರಿನ ವೇಂಕಾರ್ಯಭವನ; ಮೈಸೂರು ಬೆಂಗಳೂರುಗಳ 'ಆರ್ಯಭವನ'ವಲ್ಲ.

ಪೇಳು ಚರಿತೆಯು ಮೇಳವಿಪ ಭೂ
ಗೋಳ[1] ಕಾಸಿಗೆ ತಂದ ಮುಸುಕಿನ
ಜೋಳ[2] ಪೇಳಲಿ ಪೇಳಿ ಪೇಳಿರೆ ನಾನು ಬಾಳನಲಾ |
ಭಾಳಲೋಚನನರನಿಮೀಲಿತ
ಫಾಳನಯನದೊಳುರಿವ ಹಣತೆಯೆ
ಪೇಳು ತೇರ್ಗಡೆಯಹುದೆ ನನಗಾ ಬಹ ಪರೀಕ್ಷೆಯಲಿ ||೨೭||

ಏಕೆ ನುಡಿಯೈ ಸೊಳ್ಳೆ ನುಸಿಗಳೆ
ನಾಕುಮಾತುಗಳಾಡಿರೇ ಕಿವಿ
ತಾಕದೇನೀ ಮೊರೆಯು ನನ್ನದು ಹಾಸು ಹೊದಿಕೆಗಳೆ |
ನೂಕಿಯಾದರು ಬಿಡಿರೆ ಬಾವಿಗೆ
ಹೋಕೆಯೀ ಸುಡುಗಾಡು ಜನ್ಮವು
ಸಾಕು ಸಾಕೀ ಹಾಳುಹಾಡೆಂದೊರಲಿದನು ಹಸುಳೆ ||೨೮||

ಏನಗೈಯುವೆನೆಂತುಗೈಯುವೆ
ಆನೆ ಕುದುರೆ ಪದಾತಿ ರಥಗಳ
ಸೇನೆ ಮೊದಲಾದಖಿಳ ಸಂಪದ ವಿಭವವಿಲ್ಲದೆಯೆ |
ಖೂನಿಯಾದರು ಗೆಯಲೆ ಛೇಛೇ
ಹೀನಕಾರಿಯವದರಿನಾತ್ಮಕೆ
ಹಾನಿ[3] ತಾನಲ್ಲವೆ ಗಡಾ ಎಂದೊದರಿದನು ಹಲುಬಿ ||೨೯||

ಹಲುಬಿದನು ತಾನಿಂತು ಸಿಂಗನು
ಕಿಲುಬುಪಾತ್ರೆಯ ಹುಳಿಯನರಿಯದೆ
ಮೆಲುಕುಗೈದವರನುಭವವ ತಾ ತಡೆಯದನುಭವಿಸಿ[4] |
ಕೊಲೆಗೆ ಬಯಸಿದ ಮನವ ಛೀ ಬಲು
ಹೊಲೆಗೆಲಸ ಬಿಡು ಎಂದು ಮಾರ್ಗವ
ಸುಲಭವದನಾಳಾಪಿಸಿದನವ ತನ್ನ ಮನದೊಳಗೆ ||೩೦||

---

1 ಆ ಕಾಲದಲ್ಲಿ ಕೂಡ ಚರಿತ್ರೆ ಭೂಗೋಳ ಒಟ್ಟಿಗಿತ್ತು.

2 ಸಿಂಗನ ರಿಕ್ತದೆಸೆಯ ಸೂಚಕ 'ಧ್ವನಿ' : ಆದ್ದರಿಂದ ಉತ್ತಮಕಾವ್ಯ.

3 ಖೂನಿಯು ಆತ್ಮಹಾನಿಯೆಂಬುದು ಬಹಳ ಪ್ರಾಚೀನ ತತ್ವ.

4 ಪ್ರಸನ್ನಸರಸ್ವತಿಯ ಅಪೂರ್ವವಾದ ಉಪಮಾನಗಳಲ್ಲಿ ಒಂದು

## ನಿಂಗನಿರ್ಬಂಧನವೆಂಬ ನಾಲ್ಕನೆಯ ದಶಕವು

[1]ಲೋಕವನು ಕಾಪಿಡಲು ಪೆರುಮನ
ನೇಕ ರೂಪುಗಳಾಂತು ಖೂಳರ
ನೂಕಿ ಸಾವಿನದಾಡೆಗೆಂಟವತಾರದಲಿ ತನ್ನ |
ಶಾಕ್ಯಮುನಿ ತಾನಾದ ಕಾಲದೊ
ಳೇಕೆ ಕೊಲೆಯೀಖಳವಿನಾಶಕೆ
ಸಾಕು ಸೋದಿಸಲವರ ದುರ್ಗುಣಜಾಳಗಳನೆಂದು ||೩೧||

ಕರೆದ ವಚನಾಮೃತವ ನೆನೆನೆನೆ
ದರರೆ ಹಾರ್ವೋನಿಯುಮಿನಿಂದವ
ತರಿಸಿತಲ್ಲವೆ ಘೋರವಿಪದವಿದೆನ್ನ ಕಲಿವುದಕೆ |
ಸರಿಕಣಾ ಹಾರ್ವೋನಿಯುಮಿನಪ
ಹರಣದಿಂದಲೆ ನೀಗುವೆನು ನಿ
ತ್ತರಿಸುವೆನು ಬಂದೆಡರನೆಂದಾಳಾಪಿಸುತಲಾಗ ||೩೨||

ನಿಂಗ ನಿಶ್ಚೈಸಿದನು ಮನದೊಳ
ನಂಗ ತಾನಂದಭವನುರುತಪ
ಭಂಗಕೆಳಸಿದೊಲಾರುಮುನಿಯಂ ತಂದೆಮಗಳುದಿರ |
ಸಂಗವನು ಮುರಿದಿಡಲು ಜೀವದ
ಹಂಗುದೊರೆದು ಮಹಾಪ್ಲವಂಗವ
ದಿಂಗು ನುಂಗಿದ ಮಾಳ್ಕೆಯಿಂ ನೆಗೆನೆಗೆಯುವುತ್ಸಹವ ||೩೩||

ತಡೆದು ವರಸಾರಥಿಯವೊಲು ಬಿಗಿ
ಹಿಡಿದು ವಾಘೆಯನದರ ತಲೆಮೋ
ಲ್ಬಡಿದು ಸಿಲ್ಲಿಸಿ ತವಕದಶ್ವಾನೀಕಗಳನೆಲ್ಲ |
ಸುಡುವ ಸೂರ್ಯನು ಮಡಿದು ರಾತ್ರಿಯ
ನಡುವ ಸಾಂಗತ್ಯದಲಿ ಕಾರ್ಯಕೆ
ತೊಡಗಬೇಕೆಂದಾಖುವಾಹನ ಪಿತನ ಹೆಸರಿನವ[2] ||೩೪||

---

[1] ಪದ್ಯ ೩೧ ರಿಂದ ೩೫ ರ ವರೆಗೆ ಪುನಃ ' ಕುಳಕ '.

[2] ಆಖು = ಇಲಿ. ಆಖುವಾಹನ = ಗಣೇಶ. ಆಖುವಾಹನ ಪಿತ = ಈಶ್ವರ. ಆಖುವಾಹನ ಪಿತನ ಹೆಸರು = ಲಿಂಗ, ಆಖುವಾಹನ ಪಿತನ ಹೆಸರಿನವ = ನಿಂಗ.

ಕಾಯಿದನು ಹಗಲೆಲ್ಲ ಕುದುರೆಯ
ಲಾಯದಾಳುಗಳೆಳೆದು ಹುರುಳಿಯ
ಬೇಯಿಸುವ ವೇಳೆಯನು ಕುದುರೆ ನಿರೀಕ್ಷಿಸುವವೋಲು[1] |
ಗೇಯ ಮುಗಿದಾತ್ಮಜೆಯನೆಂಕೂ
ಬಾಯ[2] ನಿಲಿಸಲು ಹೇಳಿ ವೇಂಕಟ
ರಾಯರಾರ್ಮೋನಿಯಮು ಮುಚ್ಚಿಸಿ ಮಲಗಿ ಮರೆಯುವುದ ||೩೫||

ನಾಯ ಕಾವಲುಮಿಲ್ಲ ಮಿಕ್ಕಿನ
ಪಾಯ ತಾನೊಂದಿಲ್ಲ ಕಾಣಿರೆ
ಮಾಯವಾಗುವುದಿಂದು ಹಾರ್ಮೋನಿಯಮು ತಪ್ಪದೆಯೆ |
ಸಾಮಿ ಸೂರ್ಯನೆ ಬೇಗ ಬರದಿರು
ತೋಯಜಾರಿಯೆ ಗಗನಭೂಮಿಗ
ಜೋಯಿಸಾಗುವೆನಿಂದು ಹರಣೋದ್ಯೋಗದೊಳಗೆಂದ ||೩೬||

ತವಕವಮನದ ನೋಡಲಾರದೆ
ರವಿಯನಸ್ತಾಸುರ[3] ಗಬಕ್ಕನೆ
ಕವಳಿಸಿದ ಕಥೆಯುಸುರಿ ಬಣ್ಣಿಸಲೇಸರವನಾನು |
ಬುವಿಯು ಕತ್ತುರಿ ಪೂಸಿ ಕಗ್ಗರಿ
ರವಿಕೆ ಸೀರೆಯು ಧರಿಸಿ ತನ್ನೆರ
ಜೆನೆಯು ಮುಚ್ಚಿದೊಲಿಳಿದು ನುಂಗಿತು ಕಾರಿರುಳು ಜಗವ ||೩೭||

ಅಸ್ತನಾಗಲು ದಿನಪ ಗಾಸದ
ಕುಸ್ತಿಯಲಿ ಬಿದ್ದೆದ್ದು ನೆರೆ ಪಗ
ದಸ್ತು ಪಟ್ಟುಗಳಿಟ್ಟು ಸೆಣಸಲು ತಂದೆಮಗಳುದಿರು |
ಸುಸ್ತು ಸಾಕೆನಲೆಂಕು ಹಾಗೇ
ಅಸ್ತುವೆನೆ ವೇಂಕಾರ್ಯರಾಗಡೆ
ಗಸ್ತು ತಿರುಗುವನಾತ ನಡೆವುದ ಕೇಳಿದರು ಮಲಗಿ[4] ||೩೮||

---

[1] ಇನ್ನೊಂದು ಅಮೋಘವಾದ ಉಪಮಾನ. [2] ಎಂಕೂಬಾಯಿ — ಎರಡು ಕನ್ನಡ ಪದಗಳಿಂದಾದ ಅಚ್ಚಗನ್ನಡದ ಸಮಾಸ. ಎಂಕೂಬಾಯಿ = ಎಂಕುವಿನ ಬಾಯಿಯನ್ನು. [3] ಅಸ್ತವನ್ನು ಅಸುರನಿಗೆ ಹೋಲಿಸಿದ ಅಪೂರ್ವ ಕವಿ ಇವನೊಬ್ಬನೇ. [4] ಗಸ್ತು ತಿರುಗುವುದರಿಂದ ವೇಳೆಯನ್ನು ಸೂಚಿಸುವುದು ಎರಡನೆಯ ಧ್ವನಿ. ∴ ಉತ್ತಮಕಾವ್ಯ.

ಉರುಳಿದಾಕ್ಷಣವವರು ಬಲುಮೈ
ಮರೆತು ಮಲಗಿದರೆಳೆಯುತೊಂದೇ
ಗೊರಕೆಯನು ಮೈಯೆರಡು ತಾನುಸಿರೊಂದೊ ಎಂಬಂತೆ[1] |
ಬರಿದೆ ಬೆಳಸುವುದೇಕೆ ನಿಂಗನು
ಮುರಿದು ಹಿತ್ತಿಲ ಕದವ ಮೆಲ್ಲನೆ
ಹರಿಸಿ ಹೆಜ್ಜೆಯ ಯೆಂಕುವೇಂಕರ ಗೊರಕೆಗಾವಲಲಿ ||೩೯||

ಕೈಯ ಕಾರ್ಯವ ನೆನೆದು ಪಾದ್ಯದ
ಮೈಯ ಹಿಡಿದಡೆ ಹಾಳುಶನಿಯದು
ಕೊಯ್ಞ್ಞಿಯೆಂದಿತು ಹಿಂದೆ ತುದಿ ಮುಚ್ಚಿರದೆ ಹೋಯಿತಲಾ |
ಧೈಯನೆದ್ದರು ವೇಂಕಟಾರ್ಯರು
ರೊಯ್ಯನಾರ್ಮ್ರೋನಿಯಮನಿಸಿದರು
ಬೈಯತೊಡಗಿದರವನ ಮನಸಿಗೆ ಬಾಯ್ಗೆ ಬಂದಂತೆ ||೪೦||

## ನಿಂಗನಿರ್ವಾಸನವೆಂಬ ಐದನೆಯ ದಶಕವು

ವಾಣಿ ನಿನ್ನಯ ಸಾಕುವರ್ಣದ
ಜಾಣ ಹೆಸರಿನ ಹಿಂದೆ ಪು-ರು-ಷ-ವ
ಕಾಣಿಸಿದ ನನ್ನೆಲ್ಲ ಕಬ್ಬಗಳರ್ಧಶತಕಗಳೆ |
ಮಾಣದೆಯೆ ಮೇಲೊಂದನಿಕ್ಕಿದ
ರಾಣೆ ನಿಮ್ಮಡಿಯಾಣೆ ಸಾಕೊಂ
ದೂಣೆಯವು ತಾನಾಯಿತಲ್ಲವೆ ಪೂರ್ಣ ಸಂಖ್ಯೆಯಲಿ[2] ||೪೧||

ಶ್ಲೀಲವಶ್ಲೀಲಗಳ ಗೋವಿನ
ಹಾಲು ಗಂಜಳಕಂದು ಸಭೆಯೊಳು
ಹೋಲಿಸಿದ ವೇಂಕಾರ್ಯರೊಳಮನೆಯೊಳಗೆ ಮರೆದದನು |
ಸಾಲು ಬೈಗಳ ತಂದೆಳೆದು ಜೋ
ಮಾಲೆಯದನವಗೆಸೆಯುತಿರಲಾ
ಬಾಲ ತತ್ತರಿಸಿದನು ತಡೆಯದೆ ಮುಚ್ಚಿದನು ಕಿವಿಯ[3] ||೪೨||

---

1 'ಏಕಜೀವ ದೇಹದ್ವಯ ನ್ಯಾಯಾಲಂಕಾರ.'

2 'ಊನಾಲಂಕಾರ.'

3 'ಶೂದ್ರಶ್ರೋತ್ರಿಯ ನ್ಯಾಯಾಲಂಕಾರ.'

ಗಾಯನದೆ ಬಲಗೊಂಡ[1] ವೇಂಕರ
ಬಾಯ ಬೈಗುಳ ಕೇಳಿ ನಿಂಗನು
ಪಾಯಗಾಣದೆ ತಾನವಾಕ್ಕಾಗಲ್ಲೆ ಮರವಡಲು |
ಹೋಯಿ ಹೋಯೆಂದರಚಿ ಬೀದಿಯ
ನಾಯ ಬಡಿದಿಡುವಂತೆ ವೇಂಕರು
ಸಾಯಬಡಿದರು ನಿಂಗನನು ತುಸು ಕರುಣೆಯಿಲ್ಲದೆಯೆ ||೪೩||

ಬಡಿಬಡಿದು ಸದೆಬಡಿದು ತೋಳ್ಬಲ
ವುಡುಗಲಾಬಳಿಕೆಂದರವನನು
ಕೊಡು ಕೊಡೋ ನೀನಿಲ್ಲಿಗೆಯ್ತಂದುದಕೆ ಕಾರಣವ |
ಸುಡುವೆ ಸುಳ್ಳಾಡಿದರೆ ಮಂಡೆಯ
ನೊಡೆವೆ ಹಲ್ಲನು ಮುರಿವೆ ನಾ ಬರೆ
ಯಿಡುವೆ ನಿನಗೆಂದಾರ್ಯರಾಗಳು ಝುಂಕಿಸಿದರವನು ||೪೪||

ಗುದ್ದದಿರಿ ನಿಮ್ಮಿಬ್ಬರೀ ಕೈ
ಗುದ್ದಲಿಯ ಹಾರ್ಮೋನಿಯಮಿನೀ
ಗದ್ದಲವ ತಡೆಯದೆಯೆ ಬಂದೆನು ತೆಗೆಯಲಿದನೆನಲು |
ಸದ್ದು ಬಾಯನು ಮುಚ್ಚು ನಿನ್ನೀ
ಹದ್ದುಮೀರಿದ ನಡತೆಗಿದುವೇ
ಮದ್ದು ಇದೆಕೋ ನುಂಗುನುಂಗೆಂದಾರ್ಯರಾರ್ಭಟಿಸಿ ||೪೫||

ಬಿಡದೆ ನಿಂಗನ ತಡೆದು ಕುಕ್ಕರ
ಬಡಿಯೊ ಎನುತಲಿ ಜಡಿದು ಗೋಡೆಯ
ಕಡೆಗೆ ತಿರುಗಿದ [2]ಮುಗಳನೆಚ್ಚರಗೊಳಿಸಿಯವಳೊಡನೆ |
ಎಡೆಬಿಡದೆ ಹಾರ್ಮೋನಿಯಮನವ
ರಿಡಿದು ಕುಟ್ಟಿದರವನ ಕಿವಿಗಳ
ಹಿಡಿದು ಗಾನವ ಗಿಡಿದರಾಗಳು ನಡುನಿಶೀಥದಲಿ ||೪೬||

---

[1] ಇದು 'ಗಾಯನವು ಬಲಗೊಂಡ' ಎಂದಿರಬೇಕೆಂದು ತೋರುತ್ತದೆ. ಇವರ ಸೇವೆಯನ್ನು ಸಹಿಸಲಾರದೆ, 'ಸ್ಪೇರ್ ಮಿ ಫ್ರಮ್ ಮೈ ಫ್ರೆಂಡ್ಸ್' ಎಂಬಂತೆ, ನಾದದೇವ ಸ್ವರೂಪಿಯಾದ ಗಾಯನವು ತನ್ನನ್ನು ಈ ಸೇವೆಯ ಸಂತಾಪದಿಂದ ಬಿಡುಗಡೆಮಾಡಬೇಕೆಂದು ವೆಂಕರ ಬಾಯನ್ನು, ಅರ್ಥಾತ್ ಕೊರಳನ್ನು ಬಲಗೊಂಡಿತ್ತು, ಎಂದರೆ, ಕಾಲಿಗೆ ಬಿದ್ದು ಕೇಳಿಕೊಳ್ಳುತ್ತಿತ್ತು.

[2] ನಿಂಗನನ್ನು ಕಂಡು ಲಜ್ಜೆಯಿಂದ ತಿರುಗಿದ.

ಗಾನದೇವನ ಸೇವೆಗಿಂತಪ
ಮಾನಗೊಳಿಸಿದನೆಂದವನಿಗೆ ನ
ವೀನ ಶಿಕ್ಷಾಕ್ರಮವ ವಿಧಿಸಿದರಾರ್ಯರನುದಿನವು |
ಊನವಿಲ್ಲದೆ ಬಂದು ತನ್ನಯ
ಸೂನು[1]—ಅಲ್ಲವು—ಸುತೆಯ ಗಾನದ
ಸೋನೆಯಲಿ ನೆನೆನೆನೆಯಬೇಕೆಂದಾಜ್ಞೆಗೆಯಿದರಲಾ ||೪೭||

ಉರಿವ ಶಿಕ್ಷೆಯನಿದನು ತಾನೊಂ
ದೆರಡು ದಿನ ಸಹಿಸಿದನು ತದನಂ
ತರದೊಳಾಗದೆ ತಡೆಯಲಾರದೆ ಬಿಡಲುವಾಗದಿರೆ|
ಮರಣವೇ ಶರಣೆಂದು ಬೈಳಾ
ಪುರದ ಕೆರೆಯೊಳು ನೆಗೆದ ನಿಂಗನ
ಸುರರು ಕೈಹಿಡಿದೊಯ್ದರಿಲ್ಲಿಗೆ ಮುಗಿಯಿತೀ ಕಥನ[2] ||೪೮||

ಒಂದೆ ಸಂದೆಗ ನಿಂಗನಾ ಹಸು
ಕಂದ ಕೆರೆಯಲಿ ಮುಳುಗಿದನಲಾ
ಕೊಂದುಹಾಕಿದ ತಪ್ಪದಾರದು ಹಾರುಮುನಿಯುಮದೊ |
ಇಂದುಮುಖಿ ಯೆಂಕಳದೊ ವಾದ್ಯವ
ತಂದ ವೇಂಕಾರ್ಯರದೊ ಮೇಣರ
ವಿಂದವದನೆಯ ಕರುಣಿಸಿದನಾ ವೆಂಕಟೇಶನದೊ[3] ||೪೯||

ಅಂಬುಜೋದ್ಭವ ಮೊದಲು ಸುಪ್ರಾ
ರಂಭದಲಿ ನಾರಾಯಣನು ಮೇಣ್
ಶಂಭು ತಾನಾದಿಯಲೆ ಹರಸಲು ಕಾವ್ಯವಿದನೊಲಿದು |
ಇಂಬುಗಬ್ಬವಿದಿಲ್ಲಿಗಾಯಿತು
ತುಂಬಿತೀ ಶತಕಾರ್ಧಷಟ್ಪದ
ದಂಬುಧಿಯು ಹಾರ್ಮೋನಿಯಂ ಹರಣೆಂಬ ಸತ್ಕೃತಿಯು[4] ||೫೦||

---

[1] ಪ್ರಾಸರಕ್ಷಣೆಗಾಗಿ ಗೈದ ಚಮತ್ಕಾರ.

[2] ಮುಗ್ಗಲು ಪುಟದ 'ಪ್ರಕ್ಷಿಪ್ತ ಪದ್ಯಾವಳಿ' ನೋಡಿ.

[3] 'ಸಂದೇಹ ಸಂದೋಹಾಲಂಕಾರ.'

[4] ಈ ಕಥನದ ಕಾಲನಿರ್ಣಯವು ಇಲ್ಲಿದೆ.

# ಪ್ರಕ್ಷಿಪ್ತ ಪದ್ಯಾವಳಿ

[ಮಹಾಕವಿ ಪುರುಷಸರಸ್ವತಿಯ ಪಾರ್ತ್ರೀನಿಯಂ ಹರಣವು ವಿಷಾದಾಂತವಾಗಿ ಕೊನೆಗೊಂಡುದು ಕಂಡುಬಂದಿದೆಯಷ್ಟೆ. ಕಾವ್ಯದ ನಾಯಕನು ಈ ರೀತಿಯಲ್ಲಿ ಆತ್ಮಹತ್ಯಮಾಡಿಕೊಂಡುದರಿಂದ ನಮ್ಮ ಆರ್ಯ ಸಂಸ್ಕೃತಿಗೆ ಧಕ್ಕೆ ತಗುಲಿತೆಂದು ಯಾರಾದರೂ ಮನ ನೊಂದುಕೊಳ್ಳುವುದಾದರೆ, ಅಂತಹವರ ದುಃಖೋಪಶಮನಾರ್ಥವಾಗಿ ಈ ಕೆಳಗೆ ಕಂಡುಬರುವ ಪಾಠಾಂತರವನ್ನು ನಾವು ರಚಿಸಿ ಪ್ರಕ್ಷಿಪ್ತ ಪದ್ಯಾವಳಿಯಾಗಿ ಸಮರ್ಪಿಸಿದ್ದೇವೆ. ನೊಂದವರ ಆತ್ಮಕ್ಕೆ ತೃಪ್ತಿಯಾಗಲಿ—'ಗುಪ್ತಸಂಪಾದಕ ಪಂಚಕ.']

೪೮ನೆಯ ಪದ್ಯದ ಉತ್ತರಾರ್ಧದಿಂದ ಮುಂದಕ್ಕೆ:—

ಪರಿಣಯವೆ ಶರಣೆಂದು ಯೆಂಕಳ
ಪರಿಸಲೊಪ್ಪಿದ ಸಿಂಗನನು ವೇಂ
ಕರು ಕಟಾಕ್ಷಿಸಲಾತನಾದನು ಮನೆಯಳಿಯತನಕೆ ||೪೮||

ಮದುವೆಗೊದಗಿದ ಮಗಳ ಗಾಳಕೆ
ಮದುವಣಿಗ ವಿಹಾಸೊಂದ ಹಿಡಿಯಲು
ಗದೆಯ ಘಟ್ಟಣೆಗೆಣೆಯ ವಾದ್ಯದ ಹುಳುವ ತಾವಿರಿಸಿ |
ಕದಿಯಲದನ್ನೈತಂದ ನಿಂಗನಿ
ಗುದುವಹನಗ್ಗೈದರು ಗಡಾರ್ಯರು
(ಜಡಿಗೆಲಗ್ನದೊಳಂಜೆಸ್ಸೈ ಸುಪ್ರಾಸ ರಕ್ಷಣೆಗೆ) ||೪೯||

ಕನ್ನೆಯನು ಕೈಹಿಡಿದು ವಿದ್ಯೆಗೆ
ಸೊನ್ನೆಯಾಯಿತ್ತಿತ್ತಲವನಿಗೆ
ಹನ್ನೆರಡು ವತ್ಸರದೊಳಾದುದು ಹೆಣ್ಣು ಹದಿನೈದು |
ಬನ್ನವವನದ ನೋಡಲಾರದೆ
ಸನ್ನುತ ಶ್ರೀ ವೆಂಕಟೇಶನು
ಹೊನ್ನ ಸುರಿಮಳೆಗರೆದು ಸಲಹಿದನರರೆ ಮಝು ಭಾಪು ||೫೦||

---

# ಮಹಾಕವಿ ಪುರುಷ ಸರಸ್ವತಿ ಪ್ರಶಸ್ತಿ

ಎಂಬ

## ಅಭಿನವ ಬೈರಿಗೇಂದ್ರ ಭಯಾನಕವು

[ಇದು ಮಹಾಕವಿ ಪುರುಷ ಸರಸ್ವತಿ ಜಯಂತಿಯ ಸಂಕ್ಷಿಪ್ತ ವರದಿ. ಕಾರಣಾಂತರಗಳಿಂದ ಇದನ್ನೇ '**ಪ್ರಶಸ್ತಿ**'ಯಾಗಿ ಪ್ರಕಟಿಸಿದ್ದೇವೆ. ಇದರ ಸಂಪೂರ್ಣ ವಿವರಗಳು ಸಮ್ಮ ನಿಖಿಲ ಕರ್ಣಾಟಕದ ಏಕಮಾತ್ರ ತ್ರೈವಾರ ಪತ್ರಿಕೆಯಾದ '**ಹಾಳೂರಿನ ಹಳದಿಯ ಹಾಳೆ**'ಯಲ್ಲಿ ಈಗಾಗಲೆ ಪ್ರಕಟವಾಗಿವೆ.

೧. ಮೇಲ್ಕಂಡ ಜಯಂತಿಯು **ಐವತ್ತಾರೂ ಮುಕ್ಕಾಲು ಗಂಟೆಗಳ** ಕಾಲ ಅವ್ಯಾಹತವಾಗಿ ಅವ್ಯವಚ್ಛಿನ್ನವಾಗಿ ಅಖಂಡವಾಗಿ ಅಸ್ಖಲಿತವಾಗಿ ಅನಂತರವಾಗಿ ಸಕಲ ವೈಭವ ವಿಜೃಂಭಣೆಗಳೊಡನೆ ಸಾಂಗವಾಗಿ ಜಯಪ್ರದವೆನಿಸಿ ಮುಕ್ತಾಯದೊಡನೆ ಕೊನೆಗಂಡಿತು.

೨. ಆ ದಿನ ಸಭೆಯ ನಡುನಡುವೆ **ಶ್ರೀಯುತ 'ಅನಾಮಕ'ರವರು** ಹಸಿದವರಿಗೆ ಪಾನಕ ಪಣ್ಯಾರಗಳನ್ನೂ ನಿದ್ರೆಯಿಂದ ಬಾಧಿತರಾದವರಿಗೆ ದಿಂಬು ಸುಪ್ಪತ್ತಿಗೆಗಳನ್ನೂ ಒದಗಿಸಿ ಪುಣ್ಯವನ್ನು ಗಳಿಸಿಕೊಂಡರು.

೩. ಸಭೆಯು ಬರಖಾಸ್ತಾದಾಗ ಎದ್ದಲುಗಲಾಗದವರಿಗೆ ಸ್ಟ್ರೆಚರುಗಳನ್ನು ಮುಫತ್ತಾಗಿ ಒದಗಿಸಿ ಅದಕ್ಕೆ ತಕ್ಕ ಸಿಬ್ಬಂದಿಯನ್ನೂ ಹೊಂದಿಸಿ **ಶ್ರೀಮಾನ್ 'ಅನಾಮಧೇಯ'ರವರು** ಮಾಡಿದ್ದ ಏರ್ಪಾಡು ಬಹು ಸಮರ್ಪಕವಾಗಿತ್ತು.

ಈ ಮೂರು ಸಂಗತಿಗಳು ಪತ್ರಿಕೆಯ ವರದಿಯಲ್ಲಿ ಬಿಟ್ಟುಹೋಗಿದ್ದುವು. ವಾಚಕರು ಈ ತಿದ್ದುಪಡಿಯನ್ನು ಸೇರಿಸಿಕೊಳ್ಳಬೇಕಾಗಿ ಸವಿನಯ ವಿನಂತಿ.]

ಸಂಪಾದಕ :

'ಗುಪ್ತ ಸಂಪಾದಕ ಪಂಚಕ'ದ ಆಪ್ತಕಾರ್ಯದರ್ಶಿಯಾದ

**"ಕನ್ನಡಿ ಗರಡಿಯಾಳು"**

'ಗುಪ್ತ ಸಂಪಾದಕ ಪಂಚಕ'ದ

## ಪ್ರಥಮರ ಪ್ರಚಂಡ ಸುಪ್ರಾರಂಭ ಭಾಷಣದ ಸಂಗ್ರಹ

ಓ ನನ್ನ ಸಲ್ಮೆಯ ಹಾಳೂರಿನ
ಅಜ್ಜ ಅಜ್ಜಿಯರೆ, ಅಪ್ಪ ಅಮ್ಮದಿರೆ, ಪತಿ ಪತ್ನಿಯರೆ,
ಓ ನನ್ನ ಒಲ್ಮೆಯ ಬಾಳೂರಿನ
ಅಣ್ಣ ತಮ್ಮದಿರೆ, ಅಕ್ಕ ತಂಗಿಯರೆ, ಅರಸಾಳುಗಳೆ,
ಓ ನನ್ನ ಮೇಲ್ಮೆಯ ಮೇಲೂರಿನ
ಹಿರಿಯರು ಕಿರಿಯರೆ, ಗಂಡಸರು ಹೆಂಗಸರೆ, ಚಿಳ್ಳೆ ಪಿಳ್ಳೆಗಳೆ.
ಓ ನನ್ನ ನಚ್ಚಿನ ಮೆಚ್ಚಿನ ತಾಯ್ನಾಡಿನ
ನಾಯಿನರಿಗಳೆ, ಹುಳುಹುಪ್ಪಟೆಗಳೆ, ತರುಮರಾದಿಗಳೆ,
ಇವಲ್ಲದೆ ಇನ್ನುಳಿದ ಇತರ ಎಲ್ಲಾ ಬಾಕೀ ಬಂಧುಬಾಂಧವರೆ!
ಸರ್ವಾಖಂಡ ಸಕಲಾಶೇಷ ಸಮಸ್ತ ಸಭಾಸದರೆ!
ಈ ದಿವಸ ನಾವು "ಪಂಚ ಸಂಪಾದಕ ಗುಪ್ತ"ರು ಸಂ-
ಪಾದಿಸಿರುವ ಗ್ರಂಥಗಳ ಕರ್ತನಾದ ಕವಿ ಪುಂ-
ಗವನ ಜಯಂತಿಯಾದ ಪುಣ್ಯತಿಥಿಯನ್ನು ಹಾ-
ಳೂರಿನ ಹಳೆಯ ಹುಲಿಗಳ ಬಳಗದವರು ಆ-
ಚರಿಸುವ ಪ್ರಾರಂಭದಲ್ಲಿ ನಾವು ಪಂಚ ಸಂಪಾದಕರ್ಯೆ-
ವರು ಪ್ರಾರಂಭದಲ್ಲಿ ಭಾಷಣಮಾಡಬೇಕೆಂದು
ಆಜ್ಞೆಯಾಗಿದೆ. ಮಹಾಕವಿಯ ಜಯಂತಿಯಲ್ಲಿ ನಾವು ನಮ್ಮ
ಭಾಷಣಗಳನ್ನು ಕಾವ್ಯರೂಪದಲ್ಲಿ ಮಾಡಬೇಕೆಂದು
ತೀರ್ಮಾನಿಸಿದೆವು. ದಗ್ಧೋಪದಗ್ಧರಾದ ವಿದಗ್ಧರ ಮತ-
ದಂತೆ ಆಧುನಿಕ ಕವಿತೆಗಳಿಗೆ ಛಂದಸ್ಸಿಲ್ಲವೆಂಬ ತತ್ವವ-
ನ್ನು ಅನುಸರಿಸಿ ನಾನು ಇದನ್ನು ರಚಿಸಿದ್ದೇನೆ.
ಇದು ನಿಮ್ಮ
ಕಿವಿಗೆ ಪದ್ಯದಂತೆ ಕೇಳಿ ಬರದಿದ್ದರೂ
ಅಚ್ಚಾದಾಗ
ನಿಮ್ಮ ಕಣ್ಣಿಗೆ ಪದ್ಯದಂತೆ ಕಾಣುತ್ತದೆ.
ಜಯ್ ಎಂದು ಉದ್ಘೋಷಿಸಿ ಉದ್ಘಾಟಿಸುತ್ತೇನೆ!

'ಗುಪ್ತ ಸಂಪಾದಕ ಪಂಚಕ'ದ

## ಪಂಚಮರ ಪರಮನವೀನ ಸ್ವಾಗತಗೀತೆ

[''ಹೊಸಗನ್ನಡ ಕವಿತೆಗಳಿಗೆ ಛಂದಸ್ಸೆಂಬುದು ಬೇಕಾಗಿಲ್ಲ. ಕೆಲವು ಪಂಕ್ತಿಗಳನ್ನು ಉದ್ದವಾಗಿಯೂ ಕೆಲವನ್ನು ಮೊಟಕಾಗಿಯೂ ಇಂಚುಪಟ್ಟಿಯಲ್ಲಿ ಅಳೆದಂತೆ ಅಚ್ಚುಹಾಕಿದರೆ ಅದು ಪದ್ಯವೆನ್ನಿಸಿಕೊಳ್ಳುವುದು'' ಎನ್ನುವ ಪಂಥದವನು ನಾನಲ್ಲ. ಈಗ ನಾನು ರಚಿಸಿರುವ ಹೊಸಗನ್ನಡ ಕವಿತೆಗೆ ಲಕ್ಷಣ: ಒಂದು ಕವಿತೆಗೆ ನಾಲ್ಕು ಚರಣ, ಒಂದು ಚರಣಕ್ಕೆ ಹತ್ತು ಪಾದ. ಮೊದಲಿನ ಎಂಟು ಪಾದಗಳ ವಿಷಮ ಸ್ಥಾನಗಳಲ್ಲಿ ಎರಡು ಮಾತ್ರೆಯ ಒಂದು ಗಣ, ಸಮಸ್ಥಾನಗಳಲ್ಲಿ ಮೂರು ಮಾತ್ರೆಯ ಒಂದು ಗಣ. ಕೊನೆಯ ಎರಡು ಪಾದಗಳಲ್ಲಿ ಮೂರು ಮಾತ್ರೆಯ ಗಣವೆರಡು, ಒಂದು ಗುರು.]

ಈ
ದಿವಸ
ನಾ
ವುಗಳು
ಪೂ
ರುಷ ಸ
ರ
ಸ್ವತಿಯ
ಜನ್ಮ ದಿನವನು
ಆಚರಿಸುವೆವು ||೧||

ಹಾ
ಳೂರ
ಹಳಿ
ಯ ಹುಲಿ
ಗಳ
ಬಳಗ
ವೆ
ಲ್ಲರನು
ಬನ್ನಿರೆನ್ನುತ
ಕೂಗಿ ಕರೆವುದು ||೨||

ನೀ
ವುಗಳು
ನ
ಮ್ಮೊಡನೆ
ಸಾ
ರಿರಲ !
ಸೇ
ರಿರಲ !
ಬನ್ನಿರೆಲ್ಲರು
ತನ್ನಿ ಭಕ್ತಿಯ ||೩||

ಜಯ
ಜಯವು
ವರ
ಕವಿಗೆ
ಜಯ
ಜಯವು
ಸರು
ವರಿಗೆ
ಜಯವು ಖಂಡಿತ
ಲೋಕಕಾಗಲಿ ||೪||

'ಗುಪ್ತ ಸಂಪಾದಕ ಪಂಚಕ'ದ

## ದ್ವಿತೀಯರ ಅದ್ವಿತೀಯ ಪ್ರಶಂಸಾ ಪದ್ಯಮಾಲಿಕೆ

[ಇದನ್ನು ದ್ವಿತೀಯರು ಅಪೂರ್ವವಾದ ಪಲವು ವೃತ್ತಬಂಧಗಳಲ್ಲಿ ಬಂಧಿಸಿರುತ್ತಾರೆ. ದ್ವಿತೀಯರು ಬಹು ಸಂಕೋಚಪ್ರವೃತ್ತರಾದ್ದರಿಂದ, ಅವರ ಮಿತ್ರರೊಬ್ಬರು ಅವುಗಳನ್ನು ಬಹು ಕರ್ಣಾನಂದಕರವಾಗಿ ಹಾಡಿದರು ; ಇದನ್ನು ಎಡಗಡೆ ಅಚ್ಚುಮಾಡಿದೆ. ಈ ಕವಿತೆಯ ಭಾರಗೌರವವನ್ನು ಕವಿಗಿಂತ ಚೆನ್ನಾಗಿ ಅರಿತ ಇನ್ನೊಬ್ಬರು ಮಿತ್ರರು ಅದಕ್ಕೆ ಮಾಡಿದ ವ್ಯಾಖ್ಯಾನವನ್ನು ಬಲಗಡೆ ಅಚ್ಚುಮಾಡಿದೆ. ಈ ವಾಚನ ವ್ಯಾಖ್ಯಾನಗಳ ನಡುನಡುವೆ, ದ್ವಿತೀಯರು, ಆಯಾಸ ಪರಿಹಾರಾರ್ಥವಾಗಿ ಆಕಳ ಹಾಲನ್ನು ಆಸ್ವಾದಿಸಿ ತಲೆತೂಗುತ್ತಿದ್ದರು. ಇಲ್ಲಿ ಉಪಯೋಗಿಸಿರುವ ವೃತ್ತಗಳನ್ನು ಹಿಂದಿನ ಯಾವ ಕವಿಯೂ ಬಳಸಿದಂತೆ ಕಂಡುಬಂದಿಲ್ಲ.]

---

| | |
|---|---|
| ಹ !<br>ಹ !<br>ಹ !<br>ಹ ! ‖೧‖ | —: ಲಕ್ಷಣಂ :—<br>೧. ಉಕ್ತೆಯೆಂಬ ಛಂದದೊಳೊಂದಕ್ಕರಂ ಪಾದಮಾಗಿ ಪುಟ್ಟುವ ಎರಡು ವೃತ್ತಂಗಳೊಳಗೆ ಎರಡನೆಯದಾದ 'ನಾಗವರ್ಮಂ ಪೆಸರಿಡದ' ವೃತ್ತಂ. ೨. ಅದೇ ಛಂದದೊಳು ಅದೇ ಎರಡು ವೃತ್ತಂಗಳೊಳಗೆ ಮೊದಲನೆಯದಾದ 'ಶ್ರೀವೃತ್ತಂ.' |
| ಸೀ<br>ಸೇ<br>ಸೀ<br>ಸೈ ‖೨‖ | —: ತಾತ್ಪರ್ಯಂ :—<br>೧. ಪುರುಷ ಸರಸ್ವತಿಯ ಜಯಂತಿ ಬಗೆಗೆ ಕವಿ ತನ್ನ ಅಪರಿಮಿತವಾದ ಆನಂದವನ್ನು ಸೂಕ್ಷ್ಮವಾಗಿ ಸಂಕ್ಷೇಪವಾಗಿ ಸೂಚಿಸಿದ್ದಾನೆ. ೨. ಪುರುಷ ಸರಸ್ವತಿಯು ಅಪ್ರತಿಮನಾದ ಅಸಮಾನನಾದ ಕವಿಯೆಂಬುದು ಇಲ್ಲಿ ನಿರೂಪಿತವಾಗಿದೆ. |

---

| | |
|---|---|
| ಪುರುಷ<br>ಸರಸ<br>ತಿ ರಸಿ<br>ಕರಿಗೆ ‖೩‖ | —: ಲಕ್ಷಣಂ :—<br>೩. ಮಧ್ಯೆಯೆಂಬ ಛಂದದೊಳ್ ಮೂರಕ್ಕರಂ ಪಾದಮಾಗಿ ಪುಟ್ಟುವ ಎಂಟು ವೃತ್ತಂಗಳೊಳಗೆ ಐದನೆಯದಾದ 'ಪರಮ' ವೃತ್ತಂ. ೪. ಸುಪ್ರತಿಷ್ಠೆಯೆಂಬ ಛಂದದೊಳೈದಕ್ಕರಂ ಪಾದಮಾಗಿ ಪುಟ್ಟುವ ಮೂವತ್ತೆರಡು ವೃತ್ತಂಗಳೊಳಗೆ ಒಂದಾದ 'ಸರಸಿರುಹ' ವೃತ್ತಂ. |
| ರಸಗವಳಂ<br>ಗುಸುಗುಸಿನಾ<br>ಪುಸಿನುಡಿಯು<br>ಲ್ಲೆಸೆದಿಸಿದಂ ‖೪‖ | —: ತಾತ್ಪರ್ಯಂ :—<br>೩, ೪. ಪುರುಷ ಸರಸ್ವತಿ ರಸಿಕರಿಗೆ ರಸಗವಳ. (ಇದು) ಗುಸಿಗುಸಿನ ಪುಸಿನುಡಿಯಲ್ಲ. ಇದಂ ಒಸೆದೆ (=ಹೇಳಿದೆ)— ಎಂದು ಕವಿಯು ತಿಳಿಯಪಡಿಸುತ್ತಾನೆ. |

---

| | |
|---|---|
| ‘ಕರ್ಣನಾಟಕ ಪು<br>ರಾಣ’ ವಾದಿಗಳ<br>ಜಾಣನಾ ‘ಪುರುಷ<br>ವಾಣಿ’ನಾಮಕನ ‖೫‖ | —: ಲಕ್ಷಣಂ :—<br>೫. ಗಾಯತ್ರಿಯೆಂಬ ಛಂದದೊಳಾರಕ್ಕರಂ ಪಾದವಾಗಿ ಪುಟ್ಟುವ ಅರುವತ್ತುನಾಲ್ಕು ವೃತ್ತಂಗಳೊಳೊಂದಾದ ‘ನಾಗವರ್ಮ ನಲ್ಲಿಲ್ಲದ’ ವೃತ್ತಂ.<br>೬. ಮಧ್ಯೆಯೆಂಬ ಛಂದದೊಳ್ ಮೂರಕ್ಕರಂ ಪಾದವಾಗಿ ಪುಟ್ಟುವ ಎಂಟು ವೃತ್ತಂಗಳೊಳಗೆ ‘ಪ್ರವರ’ ವೃತ್ತಂ. |
| ಕವಿ ಪುಂ<br>ಗವನಂ<br>ಜವನ್ಸೈ<br>ಕವಳಂ ‖೬‖ | —: ತಾತ್ಪರ್ಯಂ :—<br>೫, ೬. ‘ಕರ್ಣನಾಟಕ ಪುರಾಣ’ ಆದಿಗಳನ್ನು (ಬರೆದ) ಜಾಣನಾ(ದ) ಪುರುಷವಾಣಿ (=ಸರಸ್ವತಿ) ನಾಮಕನ ಕವಿಪುಂಗವನಂ ಜವ (=ಯಮು)ನ್ಸೈ ಕವಳಂ!<br>ಮಹಾಕವಿಯು ಸ್ವರ್ಗಸ್ಥನಾದುದರಿಂದುದ್ಭವಿಸಿದ ಅದ್ಭುತ ರಸ! |
| ವರ ಕವಿ<br>ಸುರತರು<br>ಚಿರಮಿಹು<br>ದುರಿಯುತ ‖೭‖ | —: ಲಕ್ಷಣಂ :—<br>೭. ಪ್ರತಿಷ್ಠೆಯೆಂಬ ಛಂದದೊಳ್ ನಾಲ್ಕಕ್ಕರಂ ಪಾದವಾಗಿ ಪುಟ್ಟುವ ಪದಿನಾರು ವೃತ್ತಂಗಳೊಳಗೆ ‘ಸುರತರು’ ವೃತ್ತಂ.<br>೮. ಅತ್ಯುಕ್ತೆಯೆಂಬ ಛಂದದೊಳೆರಡಕ್ಕರಂ ಪಾದವಾಗಿ ಪುಟ್ಟುವ ನಾಲ್ಕು ವೃತ್ತಂಗಳೊಳಗೆ ‘ಗಿರಿಧರ’ ವೃತ್ತಂ. |
| ಕವಿ<br>ಕಿವಿ<br>ನವ<br>ಸವಿ ‖೮‖ | —: ತಾತ್ಪರ್ಯಂ :—<br>೭, ೮. (ಅಂದಿನ) ವರಕವಿ (ಇಂದಿಗೂ) ಸುರತರು (ವಿನಂತೆ) ಉರಿಯುತ ಚಿರಮಿಹುದು. (ಆ ಅಂದಿನ) ಕವಿ (ಈ ಇಂದಿನ) ಕಿವಿಗೆ ನವ ಸವಿ(ಯಾಗಿದ್ದಾನೆ). |
| ಸಿಮ್ಮ<br>ಬೊಮ್ಮ<br>ನಮ್ಮ<br>ಹೆಮ್ಮೆ ‖೯‖ | —: ಲಕ್ಷಣಂ :—<br>೯. ಅತ್ಯುಕ್ತೆಯೆಂಬ ಛಂದದೊಳ್ ‘ನಾಗವರ್ಮಂ ಕುಡದ’ ವೃತ್ತಂ.<br>೧೦. ಮೇಲೆ ಎರಡನೆಯ ವೃತ್ತ ನೋಡಿ. |
| ಜೈ<br>ಜೈ<br>ಜೈ<br>ಜೈ ‖೧೦‖ | —: ತಾತ್ಪರ್ಯಂ :—<br>೯. ‘ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ’ ಎಂಬಂತೆ ‘ಸಿಂಹ’ ಎಂಬುದರ ಅರ್ಧಾಂಗ ‘ಪುರುಷ’. ‘ಬೊಮ್ಮ’ನ ಅರ್ಧಾಂಗಿ ‘ಸರಸ್ವತಿ’. ಅರ್ಥಾತ್, ‘ಸಿಮ್ಮ ಬೊಮ್ಮ’ ಎಂದರೆ ‘ಪುರುಷ ಸರಸ್ವತಿ’ ನಮ್ಮ ಹೆಮ್ಮೆ!<br>೧೦. (ಪುರುಷ ಸರಸ್ವತಿಗೆ) ಜೈ! (ಜಯಂತಿಗೆ) ಜೈ! (ನನಗೆ) ಜೈ! (ಲೋಕಕ್ಕೆ) ಜೈ! |

ಅಭಿನವಾರ್ಧ ಪುರುಷ ಸರಸ್ವತಿ*
ಭಾಮಿನೀರಮಾರಮಣ ಭಾಮಿನೀಭಾಗ್ಯವಿಧಾತಾ
ಬೈಲಿಂಗ್ಯುಅಲ್ ಬಿಗ್ ಭಾರತಿ † ಕನ್ನಡಾಂಗ್ಲೋಭಯ ಭಾಷಾಚಕ್ರವರ್ತಿ
ಇತ್ಯಾದ್ಯನೇಕ ಬಿರುದಾಂಕಿತರಾದ
'ಗುಪ್ತ ಸಂಪಾದಕ ಪಂಚಕ'ದ

## ಮಧ್ಯಮರ "ಮಹಾಕ್ಷುದ್ರಾರ್ಧ ಶತಕಾರ್ಧ"ವನ್ನೊಳಕೊಂಡ ಪುರುಷ ಸರಸ್ವತಿ ಜಯಂತಿಯ ಶಾಸನ ಪದ್ಯವಲ್ಲರಿ

ಸ್ವಸ್ತಿ ಶ್ರೀ ವರದಾಭಯ|
ಹಸ್ತರ್ ಹರಿಯಜ ಪುರಾರಿಗಳ್ ದಯೆಗೆಯ್ಯಲ್ ||
ಪುಸ್ತಕ ಗಗನಕ್ಕಾದಿ ಗ|
ಭಸ್ತಿಯ ನೆರೆ ಪೊಗಳಿ ಪಾಡಿದಿನ್ಸ್‌ಕ್ರಿಪ್ಷನಿದಂ ||೧||

ಬರೆದೆಂ ಪ್ರಿಂಟ್ಹಾಕಿಸಿದೆಂ|
ವೆರಿ ಬೆಸ್ಟ್ ಎಲ್ಬಿಗಳ ನೂರತೊಂಬತ್ತುಗಳಂ ||
ಮೀರಿದ ಫೆದರ್ವೆಯಿಟಿನ ನಿ|
ಸ್ಸಾರದ ಪೇಪರಿನಲಿಂಡೆಲಿಬಲಿಂಕಿಂದಂ ||೨||

ಸ್ಟೋನ್ ಮೆಟಲಲ್ಲೀ ಶಾಸನ|
ಪೇನಲ್ ಷೇಪಿನಲಿ ಕುಯ್ದ ಡೆಮ್ಮೈ ಪೇಪರ್ ||
ಸ್ವಾನ್ಪೆನ್ನಿನ ಜೊತೆಯೊಳಿದ|
ನ್ನಿಂಡಿಸ್ಟ್ರಕ್ಟಿಬಲು ಎಂದು ಸಪ್ಲೈ ಗೈದರ್ ||೩||

ಸ್ವಸ್ತಿ. ಶ್ರೀ ವರದಾಭಯಹಸ್ತರ್ ಹರಿಯಜ ಪುರಾರಿಗಳ್ ದಯೆಗೈಯಲ್ ಪುಸ್ತಕ ಗಗನಕ್ಕೆ ಆದಿ ಗಭಸ್ತಿಯ(ನ್ನು) ನೆರೆ ಪೊಗಳಿ ಪಾಡಿದ inscriptionಇದಂ ||೧||

lbಗಳ 190ಗಳಂ ಮೀರಿದ very best feather-weightಇನ ನಿಸ್ಸಾರದ paper ಇನಲಿ indelible inkಇಂದಂ ಬರೆದೆಂ, printಹಾಕಿಸಿದೆಂ ||೨||

ಈ ಶಾಸನ stone, metalಅಲ್ಲ; panel shapeಇನಲಿ ಕುಯ್ದ Demy paper. ಇದಂ Swan Penಇನ ಜೊತೆಯೊಳ್ indestructibleಉ ಎಂದು supply ಗೈದರ್ ||೩||

---

* ಪುರುಷ ಸರಸ್ವತಿ 50 ಪದ್ಯ ಬರೆಯುತ್ತಿದ್ದ. ಇವನು 25 ಬರೆದಿದ್ದಾನೆ. ∴ 'ಅರ್ಧ'.

† Bi-lingual Big Bharati.

I

೧. ಓ ಟ್ರಿನಿಟಿ ಹರಿಯಜಹರರ್ಕಳೆ
ಓ ಟ್ರಿನಿಟಿ ಹರಿ ಹರರಜರ್ಕಳೆ
ಓ ಟ್ರಿನಿಟಿ ಹರ ಹರಿಯಜರ್ಕಳೆ ಅಜನೆ ಹರಿಹರರೆ|
ಓ ಟ್ರಿನಿಟಿ ಅಜ ಹರ ಹರಿಗಳೇ
ಓ ಟ್ರಿನಿಟಿ ಹರ ಅಜ ಹರಿಗಳೇ
ಪೇಟ್ರನುಗಳ್ಳೆ ನೀವು ನಮ್ಮಯ ಪುರುಷ ಸರಸತಿಗೆ ||

೨. ಮೈ ಡಿಯರ್ ಮೂದೇವರೇ ನ
ಮ್ಮೈಡಿಯಲ್ ಕವಿಗಗದಿ ಬ್ರಿಲಿಯಂ
ಟೈಡಿಯಾಸ್ಗಳನೆಕ್ಸಿಕ್ಯೂಟಿಂಗ್ ಪವರಿನೊಡಗೂಡಿ|
ನೀಡಿ ನಡಸಿದವೋಲೆನಗು ನೀವ್
ಗೈಡು ಗೈವಿರಿಯಾದರಿದಿಗೋ
ಫ್ಟೈಡು ಫ್ಟೈಡೆಂದಿಕ್ಕುವೆನು ಕವಿತಾಲಸತ್ಫಲಕೆ ||

೩. ಕಳ್ಟು ಕಾವ್ಯದ ಮಸಿಯ ಕುಡಿಕೆಯ
ಟಿಳ್ಟು ಮಾಡುವ ಮೊದಲು ಹಾವಿನ
ಬೆಳ್ಟು ಹಾಕಿದ ಗಣಪನನು ಹಾಡುವುದು ನಮ್ಮವರ|
ಫಾಳ್ಟು ಮೀರಿದರಿದನು ಸಿವಿಯರ್
ಜೋಳ್ಟು ತಪ್ಪದು ಸತ್ಯ ಥಂಡರ್
ಬೋಳ್ಟು ಬಿದ್ದಂತೆಂದು ದೇಫ್ಟೋರ್‌ರ್ ಗಣಪತಿಯ ನೆನೆವೆ ||

ಓ Trinity ಹರಿ ಅಜ ಹರರ್ಕಳೆ (ಎಂದು ಮೊದಲಾಗಿ ನೆನೆಯಬಹುದಾದ ಆರು ವಿಧಗಳಿಂದಲೂ ಆ ತ್ರಿಮೂರ್ತಿಗಳನ್ನು ನೆನೆದು*), ನೀವು ನಮ್ಮಯ ಪುರುಷ ಸರಸತಿಗೆ Patronಉಗಳ್ಳೆ ! || 1 || My dear ಮೂದೇವರೇ ! ನಮ್ಮ ideal ಕವಿಗೆ ಅಗದಿ (= ಬಹಳ) brilliant ideasಗಳನು executing powerಇನ ಒಡಗೂಡಿ ನೀಡಿ ನಡಸಿದವೋಲು ಎನಗು ನೀವ್ guideಉ ಗೈವಿರಿಯಾದರೆ ಇದಿಗೋ ! ಕವಿತಾಲಸತ್ಫಲಕೆ ಫ್ಟೈಡು ಫ್ಟೈಡೆಂದು ಇಕ್ಕುವೆನು || 2 || ಕಾವ್ಯದ ಮಸಿಯ ಕುಡಿಕೆಯ tiltಉ ಮಾಡುವ ಮೊದಲು ಹಾವಿನ beltಉ ಹಾಕಿದ ಗಣಪನನು ಹಾಡುವುದು ನಮ್ಮವರ cultಉ. ಇದನು ಮೀರಿದರೆ faultಉ; (ಮೀರಿದರೆ) thunder boltಉ ಬಿದ್ದಂತೆ severe joltಉ ತಪ್ಪದು, ಸತ್ಯ—ಎಂದು, therefore ಗಣಪತಿಯ ನೆನೆವೆ || 3 ||

---

* ಅಜಹರಹರಿ ಹರಅಜಹರಿ ಹರಿಹರಅಜ
ಅಜಹರಿಹರ ಹರಹರಿಅಜ ಹರಿಅಜಹರ.

೪. ಕಂಟಕಕೆ ಕಡು ಡೈನಮೈಟ್ ಟೀ
ಯೆಂಟಿ ರೋಗೆಲಿಫೆಂಟು ಹೆಡ್ಡಿನ
ವೊಂಟಿ ಟಸ್ಕಿನ ಪಾಟ್ಬೆಲೀಡ್ ರ್‍ಯಾಟ್‌ರೈಡರೋ ಬೆನಕ |
ಕಂಟ್ರಿ ಕರ್ಣಾಟಕದ ಕಲ್ಚ
ರ್ಜೆಂಟ್ರಿಯೆದುರಿನಲಿಡುವ ಸನ್ನೀ
ಎಂಟ್ರಿಯಂ ಸ್ಮೂತಾಗಿ ನಡೆಸಲು ಹೆಲ್ಪಸಿಸ್ಟಯ್ಯ ||

೫. ಸ್ಯಾಲ್ಯುಟೇಷನ್ಸ್ ವಾಣಿ ನಿನ್ನಯ
ವ್ಯಾಲ್ಯುಬಲ್ ಕೋ—ಆಪ ನೆಚ್ಚಿಯೆ
ವಾಲ್ಯುಬಲ್ ನಾನಪ್ಪೆನೆಂಬೀಯಾಂಬಿಷನ್ನೆನಗೆ ||
ಸ್ಟಿಲ್ಯು ಮೇ ನಾಟ್ ಕೇರ್‍ಟು ಏಡ್ಮೀ
ಸಿಲ್ಲಿ ಫಿಯರಿದು—ಅಲ್ಲ ವರದೇ
ವಿಲ್ಯು ಹೆಲ್ಪ್ಮೀ ಯುವಿಲ್ ಥ್ಯಾಂಕ್ಯು ಫಾರ್ದಿ ಅಷ್ಯೂರೆನ್ಸ್ ||

II

೧. ಲಾಂಗ್ಬಿಫೋರ್ ಕವಿರಾಜಮಾರ್ಗಂ—
ಸಾಂಗ್ಸು ಬರೆಯುವ ಜನಕೆ ರೈಟ್ಮೇಣ್
ರಾಂಗ್ಸುಗಳ ತಿಳುಹಿಸುವ ವೆರಿಫಸ್ಟ್ ಬುಕ್ಕು—ವಾಸ್ಥಾಟಾಫ್ |
ನಿಂಗಸಿರ್‍ಯಾಣಾದಿ ಕಾವ್ಯವಿ
ಹಂಗಮಂಗಳನಾದಿ ಕಾವ್ಯ ನ
ಭೋಂಗಣದೊಳಾಡಿಸಿದ ಸರಸತಿ ಪುರುಷನಾದಿ ಕವಿ ||

ಕಂಟಕಕೆ ಕಡು dynamite ! T. N. T.!* Rogue elephantಉ headಇನ ಒಂಟಿ tuskಇನ pot-bellied rat-rider ! ಓ ಬೆನಕ ! country ಕರ್ಣಾಟಕದ cultured gentryಯ ಎದುರಿನಲಿ ಇಡುವ ನನ್ನೀ entryಯಂ smoothಆಗಿ ನಡಿಸಲು help assist ಅಯ್ಯ || 4 || Salutations, ವಾಣಿ ! ನಿನ್ನಯ valuable co-op(eration)ಅನ್ನು ನೆಚ್ಚಿಯೆ ನಾನು voluble ಅಪ್ಪೆನು ಎಂಬ ಈ ambition ಎನಗೆ. 'Still, you may not care to aid me.' ಇದು silly fear; ಅಲ್ಲ, ವರದೆ ? Will you help me? You will! Thank you for the assurance || 5 || Long before ಕವಿರಾಜಮಾರ್ಗಂ—songsಉ ಬರೆಯುವ ಜನಕೆ right ಮೇಣ್ wrongsಉಗಳ ತಿಳುಹಿಸುವ very first bookಉ—was thought of, ಆದಿಕವಿ ಪುರುಷಸರಸ್ವತಿ ಆದಿಕಾವ್ಯ ನಭೋಂಗಣದೊಳು ನಿಂಗಸಿರ್‍ಯಾಣಾದಿ ಕಾವ್ಯವಿಹಂಗ ಮಂಗಳನು ಆಡಿಸಿದನು ||೧|| *Tri-Nitro-Toulene: deadlier than dynamite, an explosive.

೨. ಹೇ ಹಿಯರ್ದಿಸ್ಸೆನ್ನುತೂಹಾ
ಪೋಹಗಳ ಬಲು ಕಾಂಟ್ರೊವರ್ಸಿಯ
ಮೋಹಮೋಹಿತರಿಗೆ ಕ. ನಾ. ಪು.ವ ಸೊರೆದು ದೆನ್ನಾಫ್ಟರ್ |
ಹಾ. ಹ., ಅಥವಾ ನಿಂ. ನಿ., ಅಥವಾ
ವೆಂ. ಹ., ಥಿಃ. ರಾ., ಶಾ. ಸ್ವ., ದ. ಕು. ಚ., ಗ
ಳೋಹೊ ಸಂ. ಸಂ. ಸಂ.,ವು ಭ. ಬೃ. ಮ.,ವು ಬೈ. ಭ.,ವಾದಿಗಳ ||

೩. ಈಸ್ಥಿದಸುಪಮವೆಂಬವೊಲ್ಕಂ
ಪೋಸ್ಗುಗೈದನು ನ್ಯಾಚುರಲ್ ನೋ
ಪೋಸ್ಥಿದೆಂಬಂತವುಗಳನು ಕಂಟಿನ್ಯುಅಸ್ಸಾಗಿ |
ಫೇಸಿನಲಿ ಮುಮ್ಮೇಲು ತಾನಾ
ನೋಸು ನಿಲುವಂತೈಸಲೇ ಸ
ರ್ವೀಸು ನಮ್ಮಯ ಪೊಯಟಿನದು ಮಿಕ್ಕಿತರ ಕವಿಗಳಲಿ ||

೪. ಡಸ್ಟಿನಲಿ ಗೋಲ್ಡ್ಡಸ್ಟು ಮೌಂಟಿವ
ರೆಸ್ಟು ಗಿರಿಗಳ ಗಡಣದಲಿ ಫಾ
ರೆಸ್ಟು ಬೀಸ್ಟುಗಳೊಳಗೆ ಲಯನೆಂತಪ್ರತಿಮವಂತೆ |
ವೇಸ್ಟು ಬರಿಮಾತೇಕೆಯೀ ಫೋರ್
ಮೋಸ್ಟು ಪೊಯಟನು ನೆನೆಯೆ ತಾನೆ
ಕ್ಲಾಸ್ಟು ಕವಿಗಳ ಲಿಸ್ಟಿನೊಳಗೊಬ್ಬೊಂಟಿ ನರವಾಣಿ ||

'Hey! Hear this!'—ಎನ್ನುತ ಊಹಾಪೋಹಗಳ ಬಲು controversyಯ ಮೋಹ ಮೋಹಿತರಿಗೆ ಕರ್ಣಾಟಕ ಪುರಾಣವನ್ನು ಒರೆದು, then—after ಹಾರ್ಮೋನಿಯಂ ಹರಣ ಅಥವಾ ನಿಂಗನಿರ್ಯಾಣ ಅಥವಾ ವೆಂಕಟೇಶ ಹಗರಣ, ಥಿಃ ರಾಮುಚರಿತ, ಶಾರದಾ ಸ್ವಯಂವರ, ದಶಕಾರ್ಥ ಕುಮಾರ ಚರಿತಗಳು, ಓಹೋ! ಸಂದೇಹ ಸಂದೋಹ ಸಂದೇಶವು, ಭಯಂಕರ ಬೃಹದ್ಭೈರಿಗೇಶ್ವರ ಮಹಾಪುರಾಣವು, ಬೈರಿಗೇಂದ್ರ ಭಯಾನಕವು ಆದಿಗಳನ್ನು ||೨|| ಇದು easeಉ ಅನುಪಮವು ಎಂಬವೋಲ್, 'ಇದು natural, no pose' ಎಂಬಂತೆ ಅವುಗಳನು continuous ಆಗಿ composeಉ ಗೈದನು. Faceಇನಲಿ ಆ noseಉ ತಾನು ಮುಮ್ಮೇಲು ನಿಲುವಂತೆ ಐಸಲೇ ಮಿಕ್ಕಿತರ ಕವಿಗಳಲಿ ನಮ್ಮಯ poetಇನದು serviceಉ ||೩|| Dustಇನಲಿ gold-dustಉ! ಗಿರಿಗಳ ಗಡಣದಲಿ Mount Everestಉ! Forestಉ beastಉಗಳೊಳಗೆ Lionಉ ಎಂತು ಅಪ್ರತಿಮವು ಅಂತೆ . . . Wasteಉ! ಬರಿಮಾತೇಕೆ! ಈ fore-mostಉ poetಅನು ನೆನೆಯೆ ತಾನು exhaustಉ! ಕವಿಗಳ listಇನಲಿ ನರವಾಣಿ (=ಪುರುಷ ಸರಸ್ವತಿ) ಒಬ್ಬೊಂಟಿ! ||೪||

೫. ಪಾಸ್ಟೊಳಿರಲಿಲ್ಲ ಪ್ರೆಸೆಂಟಿನ
ಪೋಸ್ಟುಡೇಟಿನ ಗರ್ಭದೊಳಗ
ಕ್ಯಾಸ್ಟು ಮಾಡಲು ಪುರುಷ ಸರಸತಿಯುನದರಿಸ್ನಿಲ್ಲ |
ಲಾಸ್ಟು ಲಾಸ್ಟೋ ಲಾಸ್ಟು ವರಕವಿ
ಈಸ್ಟು ವೆಸ್ಟೆಲ್ಲೆಡೆಯೊಳಟ್‌ವನ್ಸ
ಹೇಸ್ಟಿನಿಂದೀ ಕವಿಜಯಂತಿಯನೆಸಗಲಿಟ್ಸ್ ವರ್ತಿಟ್ ||

III

೧. ಆಡುವುದು ಕಡುಸುಲಭವೆದ್ದು ಪ್ರೊ
ಸೀಡು ಗೈವುದೆ ಕಷ್ಟ ನುಡಿದುದ
ಡೀಡುಗಳ ಷೇಪಿನಲಿ ತೋರುವ ನೀಡಿನಿಂಪಾರ್ಟೆನ್ಸ |
ಗೂಡುಮಾಡಲು ನಮ್ಮನಿದೆ ಫಸ್ಟ
ಸೀಡು ತಾನಕ್ಕೆಂದೆವೈ ಕೇಳ್
ಏ. ಡಿ. ಯೈನೂರೆಂಬತೊಂಬತರೆಣಿಕೆಯಿಯರಿನಲಿ* ||

೨. ಮೇ ಮೊದಲ ಮಂಡೇ ದಿ ಥರ್ಡಿನ
ಸೋಮವಾರದ ದಿವಸ ಬರ್ನಿಂಗ್
ಕಾಮೆಟುದಯಿಸಿದನಲೆ ತಾವರೆಪುರದ ಹಾರ್ಟಿನಲಿ |
ನೇಮಿನಲಿ ತಾ ಪುರಿಸ ಸರಸತಿ
ಯಾ ಮಹಾಕವಿಯತಿ ಯುನಿಕೆಸ್ಟ
ಥೀಮುಗಳ ವರ್ಕೌಟು ಮಾಡಿದನವನ ಮೆಮರಿಯನು ||

Past ಒಳಿರಲಿಲ್ಲ; Presentಇನ postಉ dateಇನ ಗರ್ಭದೊಳಗೆ accostಉ ಮಾಡಲು ಪುರುಷ ಸರಸತಿ another ಇನ್ನಿಲ್ಲ. ವರಕವಿ Lostಉ, Lostಓ, Lostಉ! Eastಉ west ಎಲ್ಲೆಡೆಯೊಳ್ at once, hasteಇನಿಂದ ಈ ಕವಿಜಯಂತಿಯನು ಎಸಗಲು, it's worth it! ||೫|| ಆಡುವುದು ಕಡು ಸುಲಭ; ಎದ್ದು proceedಉ ಗೈವುದೆ ಕಷ್ಟ. ನುಡಿದುದ deedಉಗಳ shapeಇನಲಿ ತೋರುವ needಇನ importance ನಮ್ಮನು goodಉ ಮಾಡಲು, ಇದೆ ತಾನು first seedಉ ಅಕ್ಕೆ ಎಂದೆವೈ. ಕೇಳ್ A. D. ೫೮೯ರ ಎಣಿಕೆಯ yearಇನಲಿ ||೧|| May ಮೊದಲ Monday the thirdಇನ ಸೋಮವಾರದ ದಿವಸ ತಾವರೆಪುರದ heartಇನಲಿ burning comet ಉದಯಿಸಿದನಲೆ!. ತಾನು nameಇನಲಿ ಪುರಿಸ ಸರಸತಿ. ಆ ಮಹಾಕವಿ ಅತಿ uniquest themeಉಗಳ work-outಉ ಮಾಡಿದನು. ಅವನ memoryಯನು ||೨||

* ಕ. ನಾ. ಪು.ದ ೫೦ನೆಯ ಪದ್ಯದ ಪ್ರಕಾರ ಕವಿಯ ಕಾಲ ಶಕ ೫೧೧, ಎಂದರೆ ಎ.ಡಿ. ೫೮೯. ಇಲ್ಲಿಂದ ಮುಂದಿನ ಐದು ಪದ್ಯಗಳು 'ಕುಳಕ.'

೩. ಸ್ಯೂಟಬಲ್ ಫಾರ್ಮಿನಲಿ ಪೋಟಾ
ಪೋಟಿಯಿಂ ಗ್ರ್ಯಾಂಡಾಗಿಯೆ ಸೆಲಿ
ಬ್ರೇಟುಮಾಡಲಿಬೇಕು ಸೇಕ್ರೆಡ್ ಡ್ಯೂಟಿಯೆಂದೆಣಿಸಿ।
ಥೇಟು ಹದಿನಾರಾಣೆ ಪೇಡ್ಡೆಲಿ
ಗೇಟು ರಿಸ್ಸರ್ವೆಡ್ ಕಾಂಪ್ಲಿಮೆಂಟರಿ
ಸೀಟು ಬಿಟ್ಟಿಟಿಕೀಟು ತುಂಬಿದ ಗ್ಯಾದರಿಂಗಿನಲಿ ||

೪. ಟೆಸ್ಟಿಗಾಗಿ ಕವೀಂದ್ರನಪ್ಪರ್
ಬಸ್ಟಿನೆನ್ಲಾರ್ಜ್ಮೆಂಟುಗಳ ವೆರಿ
ಬೆಸ್ಟನನ್ವೇಲ್ಮಾಡಿ ತದನಂತರದೊಳಾ ಬಳಿಕ।
ಕಾಸ್ಟುಗಳ ಲೆಕ್ಕಿಸದೆ ಪಬ್ಲಿಕ್
ಟೇಸ್ಟಿಗನುಗುಣವಾಗಿ ಮಚ್‌ಮೋರ್
ಮೋಸ್ಟಿನ ಕ್ರಮದಿಂದೆ ಫುಲ್‌ಲೆಂಗ್ತ್ ಸೈಜು ಬರುವನಕ ||

೫. ಹಂತಹಂತಗಳಾಗಿ ಕವಿಯ ಜ
ಯಂತಿಯ ಕ್ಲೈಮ್ಯಾಕ್ಸಿಗೇರಿ ಸ
ಮಂತು ಸೇವೆಯ ಸಲಿಸುವೆಂಥೂಸ್ಸಿಯಸಮನು ಚಿವುಟಿ।
ಮಂತ್ಲಿಯಿನ್ಸ್ಟಾಲ್ಮೆಂಟ್ಸುಗಳ ಬಿಡಿ
ಕಂತುಗಳನಟ್ವನ್ಸೆ ತಾ ತೆ
ತ್ತ್ರಂತೆ ನಡೆಯಿಸುವಿದಕೆ ತಿಳಿಸುವೆ ಕಥನ ಕಾರಣವ ||

Suitable formಇನಲಿ ಪೋಟಾಪೋಟಿಯಿಂ grandಆಗಿಯೆ celebrateಉ ಮಾಡಲಿ ಬೇಕು, sacred dutyಎಂದೆಣಿಸಿ; ಥೇಟು ಹದಿನಾರಾಣೆ paid delegateಉ, reserved complementary seatಉ, ಬಿಟ್ಟಿಟಿಕೀಟು ತುಂಬಿದ gatheringಇನಲಿ ||೩||

Testಇಗಾಗಿ ಕವೀಂದ್ರನ upper bustಇನ enlargementಉಗಳ very bestಅನು unveil ಮಾಡಿ ತದನಂತರದೊಳಾ ಬಳಿಕ, costಉಗಳ ಲೆಕ್ಕಿಸದೆ, public tasteಇಗನುಗುಣವಾಗಿ much-more-mostಇನ ಕ್ರಮದಿಂದೆ full-length sizeಉ ಬರುವನಕ ||೪||

ಹಂತಹಂತಗಳಾಗಿ ಕವಿಯ ಜಯಂತಿಯ climaxಇಗೆ ಏರಿ ಸಮಂತು ಸೇವೆಯ ಸಲಿಸುವ enthusiasmಅನು ಚಿವುಟಿ, monthly instalmentsಉಗಳ ಬಿಡಿ ಕಂತುಗಳನು at onceಏ ತೆತ್ತಂತೆ ನಡೆಯಿಸುವ ಇದಕೆ ಕಥನ ಕಾರಣವ ತಿಳಿಸುವೆನು ||೫||

## IV

೧. ರಾಜರತ್ನಂ, ಜೀ.ಪಿ. ಯೆಂಬೆಂ
ಗೇಜಿನವರೆಂಅತ್ತು ಕನ್ನಡ
ಪೇಜಿನೊಂದೆರಡೇನೊ ಪದ್ಯದ ಬುಕ್ಕುಗಳ ಬರೆದು |
ಪೂಜೆ ತನಗಿನಿಸಿಲ್ಲವೆಂದೆ
ನ್ರೇಜುಗೊಂಡಿಹರಂತೆ ಮೇಣ್ತ
ದ್ರೇಜಿನಿಂದಲೆ ನ್ಯಾಸ್ಟಿಯಾಗಿಹರಂತೆ ಪೂರೋಳ್ಡ್ ಛ್ಯಾಪ್ ||

೨. ಸಿರ್ನೆರಂ ನಿಲುವಂಥ ಫೇಮ
ನ್ನರ್ನುಮಾಡಲು ತನ್ನ ತಾನೇ
ಛರ್ನುಮಾಡಿ ಘನಾಮೃತವ ಪಡೆಯಲಿಕೆ ಬೇಕೆಂದು |
ಲರ್ನುಮಾಡದೆ ಚಿಲ್ಲಪಲ್ಲರೆ
ಜರ್ನಲುಗಳಿಗೆ ಗೀಚಿ ಬರಿ ಹಾರ್ಟ್
ಬರ್ನಿನಿಂದೋಳ್ಡ್ ಪುರುಷ ಸರಸತಿ ಬರೆದ ವರ್ಕ್ಸುಗಳ ||

೩. ಫ್ಯಾನ್ಮೆಯಿಲ ನೆರೆನೋಡಿ ಆಥ
ರ್ನಾನೆ ಬರೆದವನೆಲ್ಲ ಜೋಕಿಗ
ನಾನಿಮಸ್ಸಾಗೆನಲು ವೆರಿಬ್ಯಾಡ್ ಡರ್ಟಿ ಷೇಂಫುಲಲಾ |
ಏನ ಹೇಳಿದರೇನು ಬಹಳ ಇ
ನೇನು ನಮ್ಮವರಿದಕೆ ಈ ಮ್ಯುಂ
ಡೇನು ಮ್ಯಾಟರಿಗಿನಿತು ಫಸ್ಸೇಕೆಂಬರ್ಯೆ ಬರಿದೆ ||

Rajaratnam, G. P. ಎಂಬ young-ageಇನವರು 8-10 ಕನ್ನಡ pageಇನ 1-2 ಏನೋ ಪದ್ಯದ bookಉಗಳ ಬರೆದು, ತನಗೆ ಇನಿಸೂ ಪೂಜೆ ಇಲ್ಲವೆಂದು enrageಉಗೊಂಡಿಹರಂತೆ; ಮೇಣ್ ತತ್ (=ಆ) rageಇನಿಂದಲೆ nastyಯಾಗಿಹರಂತೆ. Poor old chap! ||೧||

ನಿರ್ನೆರಂ (=ಸದಾ) ನಿಲುವಂಥ fameಅನ್ನು earnಉ ಮಾಡಲು ತನ್ನ ತಾನೇ churnಉ ಮಾಡಿ ಘನಾಮೃತವ ಪಡೆಯಲಿಕೆ ಬೇಕೆಂದು learnಉ ಮಾಡದೆ, ಚಿಲ್ಲಪಲ್ಲರೆ journalಉಗಳಿಗೆ ಗೀಚಿ, ಬರಿ heart-burnಇನಿಂದ old ಪುರುಷ ಸರಸತಿ ಬರೆದ worksಉಗಳ ||೨||

Fan-mailಅ ನೆರೆ ನೋಡಿ, 'ನಾನೆ Author, jokeಇಗೆ anonymousಆಗಿ ಎಲ್ಲ ಬರೆದವನು' ಎನಲು—very bad, dirty, shamefulಅಲಾ ! ಏನ ಹೇಳಿದರೇನು ? ನಮ್ಮವರು ಬಹಳ inaneಉ. 'ಇದಕೆ, ಈ mundaneಉ matterಇಗೆ ಇನಿತು fuss ಏಕೆ ಬರಿದೆ!' ಎಂಬರ್ಯೆ ||೩||

೪. ಪಾರ್ಟಿ ಡೆಡ್ನಿಜವಾದರಾ ಗ್ರೇ
ಟಾರ್ಟು ಡೆಡ್ಡೇ ನೋನೊ ಐ ಎ
ಕ್ಸಾರ್ಟ್ಯು ಛೇರ್ಮನ್ ಲೇಡಿಸ್ ಎಂಡ್ ದೋಸ್ಸಾಫ್ದಿ ಅಪೊಸಿಟ್ಸೆಕ್ಸ್ |
ಹಾರ್ಟಿಲಾಫಿನ ಹೆಸರನಿಂಪಿಂ
ಪೋರ್ಟುಗೊಳ್ಳುವ ಡರ್ಟಿ ಹಾರ್ಟ್ಲೆ
ಸ್ಸಾರ್ಟುಗಳು ಸ್ಯೆರಿಸುವ ಪಾತಕವಿದುವೆ ಇಮ್ಮೆನ್ಸ್ ಸಿನ್ ||

೫. ವೇಕಪೆಂದೆನಿತೂಳ್ದರೇನೀ
ಲೋಕವಿಂಡಿಫರೆಂಟು ಯಾರೇ
ನೇಕೆಯೆಲ್ಲಿಗೆ ಯೆತ್ತಣಿಂದಾವಾಗವದಕೇಕೆ |
ರೇಕುಗಳ ರೋಗರಿಯುನೆದುರಿಸು
ವಾ ಕರೇಜನು ಸತ್ಯಧರ್ಮದ
ಸೇಕಿಗೋಸುಗ ತಳೆದ ಹಾಳೂರವರೆ ಧೀರರಲ ||

V

೧. ವೆರಿ ಹಿರೋಯಿಕ್ಕೆಂಬೆನ್ಸೆ ಈ
ಸಿರಿ ಸನಾತನ ಸಕಲ ಸಾರಾ
ಸಾರ ಸರ್ವಾಚಾರ ಸಂರಕ್ಷಣೆಯ ಭಾರವನು |
ನಿರುತ ಶಿರಸಾವಹಿಸಿ ನಡೆಸುವು
ದರಿದಿದಿನ್ಕಂಪೇರಬಲ್ಗಾ
ಳೂರ ಕಲಿಗಳ ಹಳೆಯ ಹುಲಿಗಳ ಬಳಗದವರೆಸಕ ||

Party dead ನಿಜ. ಆದರಾ great artಉ deadಎ? No, no. I exhort you, Chairman, Ladies and those of the opposite sex! ಇಂತು hearty laughಇನ ಹೆಸರನು importಉಗೊಳ್ಳುವ dirty heartless sortಉಗಳ ಸ್ಯೆರಿಸುವ ಪಾತಕವು ಇದುವೆ immense sin! ||೪||

Wake up!—ಎಂದು ಎನಿತು ಊಳ್ದರೇನು? ಈ ಲೋಕವು indifferentಉ. ಯಾರು, ಏನು, ಏಕೆ, ಎಲ್ಲಿಗೆ, ಎತ್ತಣಿಂದ, ಆವಾಗ—ಅದಕೇಕೆ! Rakeಉಗಳ rogueryಯನು ಎದುರಿಸುವ ಆ courageಅನು ಸತ್ಯಧರ್ಮದ sakeಇಗೋಸುಗ ತಳೆದ ಹಾಳೂರವರೆ ಧೀರರಲ! ||೫||

(ಇದನ್ನು) Very heroic ಎಂಬೆನ್ಸೆ! ಈ ಸಿರಿ ಸನಾತನ ಸಕಲ ಸಾರಾಸಾರ ಸರ್ವಾಚಾರ ಸಂರಕ್ಷಣೆಯ ಭಾರವನು ನಿರುತ ಶಿರಸಾವಹಿಸಿ ನಡೆಸುವುದು ಅರಿದು. ಇದು (ಈ) ಹಾಳೂರ ಕಲಿಗಳ ಹಳೆಯ ಹುಲಿಗಳ ಬಳಗದವರ ಎಸಕ, incomparable! ||೧||

೨. ಹೋಮರನಿಗಿದು ಥೀಮು ಸೆವರಲ್
ಟೋಮುಗಳನಾಕ್ರಮಿಸಿ ಕಾವ್ಯ
ಸ್ತೋಮದತ್ಯಗ್ರದಲಿ ನಿಲಿಸುವ ಡೋಮಿನಂತಹದು |
ಗಾಮಮಲ್ಲಂಗೆದುರೆ ಕಲಿಯುಗ
ವಾಮನನು ಎನಬೇಡಿ—ನನ್ನೆ
ಸ್ಟೀಮಿನ ಸ್ಲೈಟಿಂಡಿಕೇಷನ್ನೈಸೆಯಿ ಮಾತು ||

೩. ಕೌಂಗು ನೀ ನಾ ಕುರುಚಲೆನ್ನೀ
ಟಾಂಗದೆದುರಿಗೆ ಬಸ್ಸು ನೀ ಕಿಂಗ್
ಕಾಂಗು ನೀ ಕ್ರಿಮಿ ನಾನು ಪೂವರ್ಮಿ ಎಂದು ಮೊದಲಾಗಿ |
ಲಾಂಗಗೋ ನಾ ನುಡಿದ ಫೈನಿನ್
ಕಾಂಗ್ರುಯಿಟಿಗಳ ಪುನಃ ನೆರೆದೀ
ಥ್ರಾಂಗಿನೆದುರಿನಲಿಡುವೆನಿನ್ಫರ್ಮೇಷನಿರಲೆಂದು ||

೪. ಸೊರಗದಾ ಹೈಟೆತ್ತ ಪರ್ಗೇ
ಟರಿಯಿನಾಳವದೆತ್ತ ತಾವರೆ
ಪುರದ ಮಹಕವಿ ಪುರುಷ ಸರಸತಿಯೆತ್ತ ನಾನೆತ್ತ |
ವೇರ್ಟು ವೇರಿನ ಲೆಕ್ಕ ಜೋಗಿನ
ರೋರರಿನ ಸರಿಸದಲಿ ನಲ್ಲಿಯ
ನೀರು ಸುರಿದಂತಲ್ತೆ ಕಂಪೇಗ್ಗ್ರೈಯುಲಿಬ್ಬರನು ||

Several tomeಉಗಳನಾಕ್ರಮಿಸಿ ಕಾವ್ಯಸ್ತೋಮದ ಅತ್ಯಗ್ರದಲಿ ನಿಲಿಸುವ domeಇನ ಅಂತಹದು (ಆದ) ಇದು Homerಅನಿಗೆ themeಉ! Gama(ನೆಂಬ) ಮಲ್ಲನಿಗೆ ಕಲಿಯುಗ ವಾಮನನು ಎದುರೆ?—ಎನಬೇಡಿ. ಈ ಮಾತು ನನ್ನ esteemಇನ slight indication ಐಸೆ! ||೨||

ಕೌಂಗು ನೀ, ನಾ ಕುರುಚಲು! ಎನ್ನೀ tongaದ ಎದುರಿಗೆ ನೀ busಉ! King kongಉ ನೀ, ಕ್ರಿಮಿ ನಾನು! Poor me!—ಎಂದು ಮೊದಲಾಗಿ long ago (ಕರ್ಣನಾಟಕ ಪುರಾಣದ ಮುನ್ನುಡಿಯಲ್ಲಿ) ನಾನು ನುಡಿದ fine incongruityಗಳನು information ಇರಲೆಂದು, ನೆರೆದ ಈ throngಇನ ಎದುರಿನಲಿ ಪುನಃ ಇಡುವೆನು ||೩||

ಸೊರಗ (ಸ್ವರ್ಗ)ದಾ height ಎತ್ತ? Purgatoryಇನ ಆಳವದೆತ್ತ! ತಾವರೆ ಪುರದ ಮಹಕವಿ ಪುರುಷ ಸರಸತಿಯೆತ್ತ! ನಾನೆತ್ತ! Where-to-whereಇನ ಲೆಕ್ಕ! ಇಬ್ಬರನು compare ಗೈಯಲು Jogಇನ Roarerಇನ ಸರಿಸದಲಿ ನಲ್ಲಿಯ ನೀರು ಸುರಿದಂತಲ್ತೆ! ||೪||

೫. ವೆಲ್ ಯು ಸೀ ಮೈ ಪೊಸಿಷನೆನಲಿನ್
ವ್ಯಾಲ್ಯುಬಲ್ ನೀನಿಲ್ಲದಿರಲಿನ್
ಕ್ಯಾಲ್ಕ್ಯುಲಬಲಾ ಲಾಸು ನಮ್ಮದು ಕಂಕಮಾನೆಂದು |
ಫುಲ್ಮನಸಿನಿಂದುಯ್ಯಲಾನಿ
ಲ್ಲಾಲ್ದಿ ಗ್ಯುಡ್ಲಕ್ಕೀ ಜಯಂತಿಯ
ಪಾಲಿಗಿಮ್ಮೆನ್ಸ್ ಮೆಷರಿನಲಿ ಬರಲೆಂದು ಹರಸುವೆನು ||

೧. ಈ ವೆರಿ ಸೇಮಿನ್ಸ್ಕ್ರಿಪ್ಷನಿ |
ಗೈವರಿ ಚೌಕಟ್ಟು ಹಾಕಿ ಗಿಫ್ಟಂ ಕೊಟ್ಟೆಂ ||
ಆವನಿದಂ ತಾಂ ಡಿಸ್ಟ್ರಾಯ್ |
ಗೈವನವ ಬಾಲದಹುಳುವಹನಿದು ಶಾಪಂ ||

೨. ಮೋಣಿದದೊಂದಕ್ಕರಮಂ |
ಕಾಣಿಸಿದವರಾ ಮೃಕಂಡು ಪುತ್ರನ ತೆರದೊಳ್ ||
ಕೋಣನನೇರಿದನಂ ಗೆ |
ಲ್ದೇಣಿಯ ಬೇಡದೆ ದಿವಕ್ಕೆ ನೆಗೆದೇಳುವರ್ಕ್ಕೆ ||

'Well! you see my position!'—ಎನಲ್, 'Invaluable! ನೀನು ಇಲ್ಲದಿರಲಾ lossಉ incalculable! come! come on!' ಎಂದು full ಮನಸಿನಿಂದ ಉಯ್ಯಲು, ಆನು ಇಲ್ಲಿ 'All the good luck ಈ ಜಯಂತಿಯ ಪಾಲಿಗೆ immense measureಇನಲಿ ಬರಲಿ' ಎಂದು ಹರಸುವೆನು ||೫||

ಈ very same inscriptionಇಗೆ ivory ಚೌಕಟ್ಟು ಹಾಕಿ(ಸಿ) giftಅಂ ಕೊಟ್ಟೆಂ. ಆವಂ ಇದಂ destroy ಗೈವಂ—ಅವಂ ಬಾಲದ ಹುಳುವಹಂ. ಇದು ಶಾಪಂ. ||೧|| ಮುಂದಿನದು ಸುಲಭವಾಗಿದೆ ||೨||

['ಗುಪ್ತಸಂಪಾದಕ ಪಂಚಕ'ದ ಅವಶೇಷರಾದ ಶ್ರೀ 'ಚತುರ್ಥರು', ಇಲ್ಲಿಂದ ಮುಂದೆ, ತಾವು ಪದ್ಯರಚನೆಯಲ್ಲಿ ಅಸಮರ್ಥರಾದ ಪ್ರಯುಕ್ತ, ಗದ್ಯದಲ್ಲಿ ಒಂದು ಚತುರ್ವಿಂಶತಿ ವ್ಯಾಖ್ಯಾನ ಮಾಲೆಯನ್ನು ಅವ್ಯಾಹತವಾದ ವಾಗ್ವೈಖರಿಯೊಡನೆ ಒಂದೊಂದು ವಿಷಯಕ್ಕೆ ನಲುವತ್ತು ನಿಮಿಷ ಗಳಂತೆ ಪ್ರದರ್ಶಿಸಿದರು. ಪ್ರತಿಯೆರಡರ ನಡುನಡುವೆ ''ಸುನೋ ಸುನೋ'' ಸಂಗೀತವೂ ನಡೆಯಿತು. ದ್ರವ್ಯಾಭಾವದಿಂದ ಆ ವ್ಯಾಖ್ಯಾನಗಳ ಹೆಸರನ್ನು ಮಾತ್ರ ಮಗ್ಗಲು ಪುಟದಲ್ಲಿ ಸೂಚಿಸಿದೆ.]

'ಗುಪ್ತ ಸಂಪಾದಕ ಪಂಚಕ'ದ

## ಚತುರ್ಥರ ಚತುರ್ವಿಂಶತಿ ವ್ಯಾಖ್ಯಾನಮಾಲೆ

೧. ಪುರುಷ ಸರಸ್ವತಿಯ ಪ್ರಭಾವ ಪರಂಜ್ಯೋತಿ. (ಜೀವನ ಚರಿತ್ರೆ)
೨. ಪುರುಷ ಸರಸ್ವತಿಯ ಕಾವ್ಯಪರಮಾನ್ನ. (ರಸಪ್ರಕರಣ)
೩. ನಳಪಾಕದಲ್ಲಿ ದಮಯಂತಿಯ ಸಹಾಯ. (ಪಾಕಶಾಸ್ತ್ರ)
೪. ಪುರುಷ ಸರಸ್ವತಿಯು ಪರುಷ ಸರಸ್ವತಿಯೊ? ಹರುಷ ಸರಸ್ವತಿಯೊ?
೫. ಅಥರ್ವಣ ವೇದದಲ್ಲಿ ಅಲಾರಂ ಗಡಿಯಾರ. (ಪ್ರಾಚೀನ ಸಂಸ್ಕೃತಿ)
೬. ಸಾಹಿತ್ಯದ 'ಸರ್ವ'ನಾಶವೊ? 'ಸರ್ಪ'ನಾಶವೊ? (ವಿಚಾರಂ)
೭. ಹಾವಿನ ಮೊಟ್ಟೆಗಳಿಂದ ಹಲ್ಲಿಗಳ ಉತ್ಪತ್ತಿ. (ಸರ್ಪ ಶಾಸ್ತ್ರ)
೮. ಸರ್ವಧರ್ಮಸಮನ್ವಯಕ್ಕೆ 'ಹಾರ್ಮೋನಿಯಂ ಹರಣ'ದ ಸಹಾಯ.
೯. ಉಷಃಕಾಲದಲ್ಲಿ ಸೂರ್ಯಾಸ್ತವು ಸೂಕ್ತವೆ? (ವಿಚಿತ್ರ ವಿಜ್ಞಾನ)
೧೦. ಪುರುಷ ಸರಸ್ವತಿಯು ಪೋಲೆಂಡು ದೇಶದವನು. (ಒಂದು ಮತ)
೧೧. ಹಸೀ ಕವಡೆಯ ಹಸುರು ವಿನಾಸೆ. (ವಿವಿಧ ವರ್ಣಾರ್ಥ ನಿರ್ಣಯ)
೧೨. ಪುರುಷ ಸರಸ್ವತಿಯ ಉದ್ದಕವಿ ಅರ್ಥಾತ್ ಮಹಾಕವಿಯ ಮುರಿದಕೊಂಬು.
೧೩. ನನ್ನವರ್ಗದವರಿಗೆ ನಶ್ಯದ ಆವಶ್ಯಕತೆ. (ಒಂದು ಊಹೆ)
೧೪. ಕವಿಪುಂಗವನ ಗೊಣಗುಂಗಾಟ. (ಗಾನ ದೋಸೆಗಳ ಮೂಲಕ)
೧೫. ಕಾಡುಕೋಳಿಯ ಕೆಂಪು ಕಿರೀಟ. (ಪಶುಪಕ್ಷ್ಯಾದಿಗಳ ವ್ಯವಸಾಯ)
೧೬. ಔಷ್ಟ್ರರಾಷ್ಟ್ರದಲ್ಲಿ ಉಷ್ಟ್ರಭಾಷೆಯ ಅಗತ್ಯ. (ಉದ್ಧಾರ ಕಾರ್ಯ)
೧೭. ವಿನಾಸೆ, ವಿನಾಶೆ, ವಿನಾಷೆ—ಇವುಗಳ ಬೆಳವಣಿಗೆ. (ಭಾಷಾ ಶಾಸ್ತ್ರ)
೧೮. ಪುರುಷ ಸರಸ್ವತಿ ಪೂರ್ವ ಜನ್ಮದಲ್ಲಿ ಪ್ರಚಾರಕನಾಗಿದ್ದನೊ? ಪರಿಚಾರಕನಾಗಿದ್ದನೊ? (ಇತಿಹಾಸ)
೧೯. ತಾವರೆ ಪುರದಲ್ಲಿ ತೊಣಚಿಗಳ ಹಾವಳಿ. (ಸಚಿತ್ರ)
೨೦. ಜಿರಲೆಗಳು ಜೇನುತುಪ್ಪ ಕುಡಿಯುವ ವಿಧಾನ. (ಕ್ರೀಡಾ ಪ್ರಪಂಚ)
೨೧. ಪುರುಷ ಸರಸ್ವತಿ ಪುರುಷನೊ? ಪುರುಷಾಮೃಗವೊ? (ಚರ್ಚೆ)
೨೨. ಸಮಶೀತೋಷ್ಣವಲಯಗಳಲ್ಲಿ ಪುರುಷ ಸರಸ್ವತಿಯ ಅವಶೇಷಗಳು. (ಪ್ರಾಚ್ಯನ್ವೇಷಣ)
೨೩. ಪುರುಷ ಸರಸ್ವತಿಯೂ ಪ್ಯಾರಿಸ್ಸಿನ ಕ್ಲಬ್ಬುಗಳೂ. (ಮಾಯಾಲಾಂದ್ರ)
೨೪. ಜೈನ ಬೌದ್ಧ ವೀರಶೈವ ಬ್ರಾಹ್ಮಣೇತ್ಯಾದಿ ಧರ್ಮಗಳಲ್ಲಿ ಪುರುಷ ಸರಸ್ವತಿಯ ಸ್ಥಾನ. (ಧರ್ಮ ಜಿಜ್ಞಾಸೆ)

## ಕಾರ್ಯದರ್ಶಿಗಳ ಉಪಕ್ರಮಾನಂತರದ ಆಶುಭಾಷಣ

[ಕಾರ್ಯದರ್ಶಿಯವರು ತಮ್ಮ ಉಪಕ್ರಮ ಭಾಷಣವನ್ನು ಪ್ರತ್ಯೇಕ ಪುಸ್ತಕವಾಗಿ ಪ್ರಕಟಿಸಿರುವುದರಿಂದ ಅವರು ಅನಂತರ ಮಾಡಿದ ಆಶುಭಾಷಣವನ್ನು ಮಾತ್ರ ಇಲ್ಲಿ ಸಂಗ್ರಹಿಸಲಾಗಿದೆ.]

ಶ್ರೀ'ಮಧ್ಯಮ'ರು ನಮಗೆ ಕೊಟ್ಟಿರುವ ಶಾಸನಕ್ಕೆ ನಾವು ಕೃತಜ್ಞರಾಗಿದ್ದೇವೆ. ಇದನ್ನು ನಾಶಮಾಡಿದವನು ಬಾಲದ ಹುಳುವಾಗುವ ಶಾಪವೂ ಇದನ್ನು ಕಾಣಿಸಿದವನು ದಿವಂಗತನಾಗುವ ಅನುಗ್ರಹವೂ ಸಂಪ್ರದಾಯೋಕ್ತಿಗಳೆಂದು ಹೇಳಬಹುದಾದರೂ ಇಂತಹ ಶಾಸನಗಳನ್ನು ನಮ್ಮ ಬಳಗದ ಕಚೇರಿಯ ಕುಡ್ಯಗಳ ಮೇಲೆ ಪ್ರದರ್ಶಿಸಬೇಕೆಂದು ತತ್ಕರ್ತರುಗಳ ನಿರೀಕ್ಷಣೆಯೆಂದು ನಾವು ಭಾವಿಸಿದರೆ ಅದು ತಪ್ಪಾಗಲಾರದೆಂದು ನಾನು ನಂಬಿದರೆ ತಾವು ಅದನ್ನು ಅಪಚಾರವಾಗಿ ಎಣಿಸುವುದಿಲ್ಲವೆಂದು ಆಶಿಸಿದರೆ ಅದು ಅಕ್ಷಮ್ಯವೆನಿಸುವ ಅಪರಾಧಕ್ಕೆ ಒಳಗಾಗಲಾರದಷ್ಟೆ.

ಆದರೆ ಈ ಶಾಸನಗಳನ್ನೆಲ್ಲ ಯೋಗ್ಯವಾದ ರೀತಿಯಲ್ಲಿ ಪ್ರದರ್ಶಿಸಲು ನಮ್ಮ ಕಟ್ಟಡದ ಕೋಣೆಗಳಿಗೆ ನಾಲ್ಕೇ ಗೋಡೆಗಳಿರುವುದು ಒಂದು ದೊಡ್ಡ ಕೊರತೆಯಾಗಿದೆ. ಇದನ್ನು ಗಮನಿಸಿ ಉದಾರಿಗಳು ನಮಗೆ ಇನ್ನೂ ಒಂದೆರಡು ವಿಶಾಲವಾದ ಗೋಡೆಗಳನ್ನು ಕಟ್ಟಿಸಿಕೊಡಬೇಕೆಂದು ಈ ಮೂಲಕ ಬೇಡುತ್ತೇನೆ. ಇದೇ ಸಮಯದಲ್ಲಿ ಒಂದು ಸುತ್ತಿಗೆಯನ್ನೂ ಮೊಳೆಗಳನ್ನೂ ದಾನಮಾಡುವವರಿಗೆ ಬಳಗವು ಬಹು ಕೃತಜ್ಞವಾಗಿರುತ್ತದೆ.

ಈಚೆಗೆ ನಮ್ಮ ನಡುವೆ ಯಾವ ಮದುವೆ, ಮುಂಜಿ, ಮರಣ ಮುಂತಾದ ಮಹೋತ್ಸವಗಳಾದರೂ ಅದನ್ನು ಕುರಿತು ಮನೋವೇಗ ವಿದ್ಯುದ್ವೇಗಗಳಿಗಿಂತ ಮಿಗಿಲಾದ ವೇಗದಿಂದ ಕಬ್ಬಂಗಳುದ್ಭವಿಸುತ್ತಿರುವುದು ನಮ್ಮ ಪುರಾಕೃತಕರ್ಮವಿಶೇಷ, ನಮ್ಮ ಉತ್ತರೋತ್ತರದ ದಿಕ್ಸೂಚಿ. ಆದರೆ ಹೀಗೆ ಬರುವವುಗಳಲ್ಲಿ ಅನೇಕವು ಅಪಕ್ವವಾಗಿವೆಯೆಂಬುದನ್ನು ವಿಷಾದದಿಂದ ತಿಳಿಸಬೇಕಾಗಿದೆ. ಅಂತಹ ಅಪಕ್ವಗಳನ್ನು ಕೆಳಗೆ ನೆಲಮಾಳಿಗೆಯಲ್ಲಿ ಒಣಹುಲ್ಲಿನಡಿ ಹೂತಿಟ್ಟು, ಅವು ಪಕ್ವವಾದನಂತರ ಹೊರಗೆ ತಂದು ನೇತುಹಾಕಬೇಕೆಂದು ಕಳೆದ ಮೀಟಿಂಗಿನಲ್ಲಿ ಬಹುಮತದಿಂದ ತೀರ್ಮಾನಿಸಿದ್ದೇವೆ. ಆದ್ದರಿಂದ ಈಗ ಇರುವ ನೆಲಮಾಳಿಗೆಯನ್ನು ಇನ್ನೂ ಬಡಾಯಿಸಲು ಮಹಾಜನರು ತಮ್ಮ ತನುಮನಧನಗಳಿಂದ ನೆರವಾಗಬೇಕೆಂದು ಕಳಕಳಿಯ ಬೇಡಿಕೆ.

(ಇಲ್ಲಿ ಪುರುಷ ಸರಸ್ವತಿಯ 'ಕರ್ಣನಾಟಕ ಪುರಾಣ' ಮತ್ತು 'ಹಾರ್ಮೋನಿಯಂ ಹರಣ' ಎಂಬ ಎರಡು ಶತಕಾರ್ಧಗಳಿಂದ ಒಂದೊಂದು ಷಟ್ಪದಿಯನ್ನು ಆರಿಸಿಕೊಂಡು ಒಂದು ನೂರು ಮಂದಿ ಗಮಕಿಗಳು ಸುಶ್ರಾವ್ಯವಾಗಿ ಅಂದು ತೋರಿಸಿದರು.)

## ಅಧ್ಯಕ್ಷರ ಆರಂಭ ಭಾಷಣದ ಸಂಗ್ರಹ

(ಅಧ್ಯಕ್ಷರು ತಮ್ಮ ಭಾಷಣವನ್ನು ಉಷ್ಟ್ರಭಾಷೆಯಲ್ಲಿ ಅಪ್ಪಣೆ ಕೊಡಿಸಿದರು. ಸಭಿಕರೊಬ್ಬರು ಅದನ್ನು ಕನ್ನಡಕ್ಕೆ ತರ್ಜುಮೆಮಾಡಿ ಉಪಕರಿಸಿದರು.)

ನಾನು ಪ್ರಾಜ್ಞನಲ್ಲ, ಅಜ್ಞ. ನಾನು ಪ್ರೌಢನಲ್ಲ, ಮೂಢ. ನಾನು ಕನ್ನಡಿಗನಾದರೂ ನನಗೆ ಕನ್ನಡ ಅಷ್ಟು ಚೆನ್ನಾಗಿ ಗೊತ್ತಿಲ್ಲ. ನಾನು ಹಲವು ತಿಂಗಳು ಉಷ್ಟ್ರರಾಷ್ಟ್ರದಲ್ಲಿ ತಿರುಗಾಡಿ ಉಷ್ಟ್ರಭಾಷೆಯಲ್ಲಿ ಪಾರಂಗತನಾಗಿ ಕಳೆದ ತಿಂಗಳು ಇಲ್ಲಿಗೆ ಬಂದಾಗ, ನನ್ನ ಪೂಜ್ಯ ತೀರ್ಥರೂಪರು ಪರಂಧಾಮವನ್ನೈದಲು ನಾನು ನಿರ್ಗತಿಕನಾಗಿ ನಿರಾಶ್ರಿತನಾಗಿ ನಿಸ್ಸಹಾಯನಾಗಿ ನಿರಾಲಂಬನನಾಗಿ—ಒಟ್ಟಿನಲ್ಲಿ ನಿರ್ ಎಲ್ಲಾ—ಆಗಿದ್ದ ಕಾಲದಲ್ಲಿ ಈ ದಿವಸ ಉದ್ದಾಮ ಕವಿತೆಗಳನ್ನು ರಚಿಸಿ ತಮ್ಮನ್ನು ಸಂತೋಷಪಡಿಸಿದ 'ಗುಪ್ತ ಸಂಪಾದಕ ಪಂಚಕ'ವು ನನ್ನ ಇದ್ದ ಎರಡು ಭುಜಗಳು ಐದಾದುವೆಂಬಂತೆ ನನಗೆ ಆ ಅಪರಕರ್ಮವನ್ನು ನೆರವೇರಿಸುವುದಕ್ಕೆ ಸಹಾಯಕರಾದುದು ಮಾತ್ರವಲ್ಲದೆ, ನಾಲ್ವರು ವಾಹಕರಾಗಿಯೂ ಒಬ್ಬರು ಪುರೋಹಿತರಾಗಿಯೂ ನಿಂತು, ನಮ್ಮ ಪೂಜ್ಯಪಾದರಾದ ತೀರ್ಥರೂಪರಿಗೆ ಕೈ ಕೊಟ್ಟು ಮೆಟ್ಟಿಲು ಮೆಟ್ಟಿಲಾಗಿ ಸ್ವರ್ಗದ ಸೋಪಾನಗಳನ್ನು ಹತ್ತಿಸಿ ಇಂದ್ರನ ಅರ್ಧಾಸನವನ್ನು ದೊರಕಿಸಿಕೊಡುವ ಮೂಲಕ ನನ್ನ ಧರ್ಮವನ್ನು ಕಾಪಾಡಿ ಕೊಟ್ಟು ನನ್ನ ಆತ್ಮಕ್ಕೆ ಪಂಚಭೂತಪ್ರಾಯರಾದರು, ನನ್ನ ದೇಹಕ್ಕೆ ಪಂಚಪ್ರಾಣ ಸಮಾನರಾದರು.

ಮಹನೀಯರೆ, ಜಗತ್ತಿನಲ್ಲಿ ಕೃತಜ್ಞತೆಯೆಂಬುದು ಅಪರೂಪ. ಈ ಅಪೂರ್ವ ಗುಣವನ್ನು ಮರೆಯದೆ ಆ ಋಣವನ್ನು ಪರಿಹರಿಸುವುದಕ್ಕಾಗಿ ನಾನು ಈ ದಿವಸ, ಈ ನನ್ನ ಪಂಚೇಂದ್ರಿಯ ಪಂಚಭೂತ ಪಂಚಪ್ರಾಣ ಸರ್ವಸ್ವರಾದ 'ಗುಪ್ತ ಸಂಪಾದಕ ಪಂಚಕ'ವು ಸಂಪಾದಿಸಿರುವ ಗ್ರಂಥಗಳ ಕರ್ತನಾದ ಮಹಾಕವಿ ಪುರುಷ ಸರಸ್ವತಿಯ ಜಯಂತಿಯಲ್ಲಿ ಅಧ್ಯಕ್ಷಸ್ಥಾನವನ್ನು ಅಲಂಕರಿಸಲು ಒಪ್ಪಿ ಬಂದಿದ್ದೇನೆ.

ಇದುವರೆಗೆ ನಡೆದಿರುವ ಚತುರ್ವಿಂಶತಿ ವ್ಯಾಖ್ಯಾನ ಮಾಲೆಯ ಕೆಲವು ವ್ಯಾಖ್ಯಾನಗಳ ಸಾರಾಂಶವನ್ನು ಸಭಾಸದರಿಗೆ ಸೂಕ್ಷ್ಮವಾಗಿ ಸಮರ್ಪಿಸಬೇಕೆಂದು ಹಲವರು ತವಕಿಸುತ್ತಿರುವುದರಿಂದ, ೨೪ ಮಂದಿ ಮಾತ್ರ, ಆ ೨೪ ವಿಷಯಗಳ ಸಾರಾಂಶವನ್ನು ಮಟ್ಟಿಗೆ, ಒಬ್ಬೊಬ್ಬರೂ ಅರ್ಧ ಗಂಟೆಗಿಂತ ಹೆಚ್ಚಿನ ಕಾಲವನ್ನು ತೆಗೆದುಕೊಳ್ಳದೆ ಭಾಷಣಮಾಡಬೇಕಾಗಿ ಬಿನ್ನಹಮಾಡಿಕೊಳ್ಳುತ್ತೇನೆ. ಇಂತು ತಮ್ಮ ದಾಸಾನುದಾಸನಾದ ನಾನು—ಅಧ್ಯಕ್ಷ.

(ಮೂರು ಭಾಷಣಗಳ ಸಂಗ್ರಹವನ್ನು ಮಾದರಿಗಾಗಿ ಮುಂದೆ ಕೊಟ್ಟಿದೆ.)

## ೧. ಜಿರಲೆಗಳು ಜೇನುತುಪ್ಪ ಕುಡಿಯುವ ವಿಧಾನ

ಜಿರಲೆಗಳು ಜೇನುತುಪ್ಪ ಕುಡಿಯಬೇಕೆಂದು ಬಯಸಿದಾಗ ಜೇನುಹುಳುಗಳ ಗೂಡಿನ ಬಳಿಗೆ ಗುಂಪಾಗಿ ಬಂದು "ಏ, ಜೇನುಹುಳುಗಳೇ! ಕಣ್ಣಾಮುಚ್ಚಾಲೆ ಆಟವಾಡೋಣ, ಬರುತ್ತೀರಾ?" ಎಂದು ಕರೆಯುತ್ತವೆ. ಜೇನುಹುಳುಗಳೂ ಆಟ ವಾಡಲು ಒಪ್ಪಿ ಬರುತ್ತವೆ. ಆಗ ಒಂದು ಜಿರಲೆ ತಾನು 'ಹಕ್ಕಿ'ಯಾಗಿ ಬಚ್ಚಿಟ್ಟು ಕೊಳ್ಳಲು ಒಪ್ಪಿಕೊಳ್ಳುತ್ತದೆ. ಆಗ ಉಳಿದ ಜಿರಳೆಗಳಲ್ಲಿ ಒಂದೊಂದು ಜಿರಳೆ ಒಂದೊಂದು ಜೇನುಹುಳುವಿನ ಕಣ್ಣುಮುಚ್ಚುತ್ತದೆ. ಆಗ 'ಹಕ್ಕಿ'ಯಾಗಿದ್ದ ಜಿರಳೆ ಅವಿತು ಕೊಳ್ಳುತ್ತದೆ. ಆಗ ಉಳಿದ ಜಿರಳೆಗಳು

ಕಣ್ಣಾಮುಚ್ಚೇ—ಕಾಡೇಗೂಡೇ ಉದ್ದಿನ ಮೂಟೇ—ಉರುಳೀ ಹೋಯ್ತು
ನಮ್ಮಕ್ಕಿ ಬಿಟ್ಟೆನೋ ಬಿಟ್ಟೆ—ನಿಮ್ಮಕ್ಕಿ ಹಿಡಕೊಳ್ರೋ ಹಿಡಕೊಳ್ಳಿ.

ಎಂದು ಮೇಳವಾಗಿ ಹಾಡಿ ಹಿಡಿದಿದ್ದ ಜೇನುಹುಳುಗಳನ್ನು ಬಿಡುತ್ತವೆ. ಆ ಜೇನು ಹುಳುಗಳೆಲ್ಲವೂ ಕಣ್ಣುಗಳನ್ನು ಹೊಸಗುತ್ತ ಮಿಟಕಿಸಿಕೊಂಡು ಅವಿತ ಜಿರಳೆಯನ್ನು ಹುಡುಕಿಕೊಂಡು ಹೋಗುತ್ತವೆ.

ಅದೇ ಸಮಯವನ್ನು ಕಾಯುತ್ತಿದ್ದ ಜಿರಲೆಗಳು ಸರಸರನೆ ಜೇನುಹುಳು ವಿರಹಿತವಾದ ಜೇನುಗೂಡನ್ನು ಆಕ್ರಮಿಸಿ ಒಳಗಿನ ಜೇನುತುಪ್ಪವನ್ನೆಲ್ಲ ಬರಬರನೆ ಹೀರಿ ಹಾರಿಹೋಗುತ್ತವೆ. ಅಷ್ಟರಲ್ಲಿ ಜೇನುಹುಳುಗಳು ಅವಿತ ಜಿರಲೆಯನ್ನು ಪತ್ತೆ ಹಚ್ಚಿ ಹಿಡಿದುಕೊಂಡು ಬಂದು "ನಮ್ಮಕ್ಕಿ ಹಿಡಿದೆವೋ ಹಿಡಿದೆವು!" ಎಂದು ಜಯಘೋಷ ಹಾಕುತ್ತವೆ. ಆದರೆ ಮರುಕ್ಷಣದಲ್ಲಿಯೇ ಅಲ್ಲಿ ಜಿರಳೆಗಳೂ ಇಲ್ಲ! ಜೇನುತುಪ್ಪವೂ ಇಲ್ಲ!—ಎಂಬುದನ್ನು ಕಂಡು ಆ ಜೇನುಗಳಿಗೆ ಅಸಾಧ್ಯ ಆಗ್ರಹ ವುಂಟಾಗಿ, ಒಂದೊಂದೂ ಒಂದೊಂದು ಕುಟುಕು ಹಾಕಿ ಆ 'ಹಕ್ಕಿ' ಜಿರಲೆಯನ್ನು ಕೊಂದು, ಅದನ್ನು ಸಮಭಾಗವಾಗಿ ವಿಭಾಗಿಸಿ ತಿನ್ನುವುವು.

ಇದು ಜಿರಲೆಗಳು ಜೇನುತುಪ್ಪ ಕುಡಿಯುವ ವಿಧಾನ.

### ಇದರಿಂದ ಕಲಿಯಬೇಕಾದ ನೀತಿಗಳು

೧. ಕಣ್ಣಾಮುಚ್ಚೆಯಾಡುವಾಗ 'ಹಕ್ಕಿ'ಯಾದವನು ಬಚ್ಚಿಟ್ಟುಕೊಳ್ಳಬಾರದು. ಬಚ್ಚಿಟ್ಟುಕೊಳ್ಳುವಂತೆ ನಟಿಸಿ ತಲೆಮರೆಸಿಕೊಂಡು ಬದುಕಬೇಕು.

೨. ಸಮಸ್ತ ಜಿರಳಾ ಸಮಾಜದ ಸುಖಕ್ಕಾಗಿ ವ್ಯಕ್ತಿ ಜಿರಳೆಯು ತನ್ನ ಸ್ವಾತ್ಮಾರ್ಪಣವನ್ನು ಹೇಗೆ ತೃಣಸಮಾನವಾಗಿ ಸಲ್ಲಿಸಿತೋ ಹಾಗೆ ಮನುಷ್ಯನೂ ತನ್ನ ಸಮಾಜದ ಹಿತಕ್ಕಾಗಿ ಹತನಾಗಿ ಬಲಿದಾನ ಕೊಟ್ಟು ಹುತಾತ್ಮನೆನ್ನಿಸಿಕೊಳ್ಳಬೇಕು.

## ೨. ಸಾಹಿತ್ಯದ “ಸರ್ವ” ನಾಶವೊ? “ಸರ‍್ವ” ನಾಶವೊ?

ಕನ್ನಡವೆಲ್ಲವೂ ಸಂಸ್ಕೃತಜನ್ಯ.

‘ಸರ್ವ’ ಎಂಬುದು ಸಂಸ್ಕೃತ ರೂಪ. ಇದನ್ನು ಸಂಸ್ಕೃತದಲ್ಲಿ सर्व ಎಂದು ಬರೆಯುತ್ತಾರೆ. ಇದು ಸರಿ.

‘ಸರ‍್ವ’ ಎಂಬುದು ಕನ್ನಡದ ರೂಪ. ಈ ರೂಪ ಸಂಸ್ಕೃತದಲ್ಲಿ ಕಂಡುಬರುವುದಿಲ್ಲ. ಇದು ತಪ್ಪು.

‘ಸರ್ವ’, ‘ಧರ್ಮ’, ‘ಕರ್ಣ’, ‘ಬರ್ಹಿ’ ಮುಂತಾದ ಅನೇಕ ರೂಪಗಳಲ್ಲಿ ಮೂಲಾಕ್ಷರವನ್ನು ಬರೆದು ಅದರ **ತಲೆಯ ಮೇಲೆ** ರೇಫೆಯನ್ನು ಕಾಣಿಸುವುದು ಸನಾತನ ಸತ್ಸಂಪ್ರದಾಯ. ಉದಾ.— सर्व, कर्ण, धर्म, बर्हि, ಇತ್ಯಾದಿ.

ಈ ರೀತಿಯ ರೇಫೆಯನ್ನು ಕನ್ನಡಿಗರು ‘ಅರ್ಕಾವೊತ್ತು’ ಎನ್ನುವರು.

‘ಅರ್ಕ’ ಎಂದರೆ ಸೂರ್ಯ, ಭಗವಾನ್ ಸೂರ್ಯನಾರಾಯಣಸ್ವಾಮಿ.

‘ಒತ್ತು’ ಎಂದರೆ ಗುರುತು, ಮುದ್ರೆ, ಪ್ರಭಾವ ಮುದ್ರೆ.

ಆದ್ದರಿಂದ ‘ಅರ್ಕಾವೊತ್ತು’ ಎಂದರೆ ಸೂರ‍್ಯನಾರಾಯಣನ ಪ್ರಭಾವ ಮುದ್ರೆ.

ಸೂರ್ಯನಾರಾಯಣನ ಪ್ರಭಾವವಿರುವುದು ಜನರ ತಲೆಯ ಮೇಲೆ. ‘ಅರ್ಕಾವೊತ್ತು’ ಇರುವುದೂ ಮೂಲಾಕ್ಷರದ ತಲೆಯ ಮೇಲೆ.

ಸೂರ್ಯನಾರಾಯಣನ ಪ್ರಭಾವವನ್ನು ತಿರಸ್ಕರಿಸಿದರೆ ಜೀವ ಹಾನಿಯಾಗುತ್ತದೆ. ಅದರಂತೆಯೇ ‘ಅರ್ಕಾವೊತ್ತ’ನ್ನು ತಿರಸ್ಕರಿಸಿದರೆ ಸಾಹಿತ್ಯ ಹಾನಿಯಾಗುತ್ತದೆ.

ಆದ್ದರಿಂದ ‘ಅರ್ಕಾವೊತ್ತು’ ಅಮೃತಕ್ಕಿಂತ ಅಮೂಲ್ಯ.

ಅದಕ್ಕಾಗಿ ‘ಅರ್ಕಾವೊತ್ತ’ನ್ನು ಮೂರ್ಧ್ನದಲ್ಲಿ ಧರಿಸಿದ ‘ಸರ್ವ’ವೊಂದೇ ಸ್ವೀಕರಣೀಯವಲ್ಲದೆ, ಇನ್ನೊಂದು ರೂಪದ ಹೆಸರನ್ನು ಬಾಯಿಂದ **ಉಚ್ಚರಿಸಲೂ ಬಾರದು. ಶಾಂತಂ ಪಾಪಂ.**

[ಈ ವೇಳೆಗೆ ಸಭಿಕರೊಬ್ಬರು “‘ಸರ್ವ’ವೊಂದೇ ಸ್ವೀಕರಣೀಯವಾದರೆ ಸಾಹಿತ್ಯದ ‘ಸರ‍್ವ’ ನಾಶವಾಗುತ್ತದೆ. ‘ಸರ‍್ವ’ವೊಂದೇ ಸ್ವೀಕರಣೀಯವಾದರೆ ಸಾಹಿತ್ಯದ ‘ಸರ್ವ’ ನಾಶವಾಗುತ್ತದೆ. ಅಂತೂ ಒಟ್ಟಿನಲ್ಲಿ ಸಾಹಿತ್ಯದ ‘ಸರ್ವ(ರ‍್ವ)’ ನಾಶ ಸಿದ್ಧ” ಎಂಬ ವಿಷಯದ ಕಡೆಗೆ ಸಭೆಯ ಗಮನವನ್ನೆಳೆಯಲು, “ಸಾಹಿತ್ಯದ ‘ಸರ್ವ(ರ‍್ವ)’ ನಾಶವಾಗದಿರಬೇಕಾದರೆ ‘ಸರ್ವ’ ಮತ್ತು ‘ಸರ‍್ವ’ ಎಂಬ ಎರಡೂ ರೂಪಗಳು ಸ್ವೀಕರಣೀಯಗಳಾಗಬೇಕು” ಎಂಬ ಠರಾವನ್ನು ಸಭೆಯು ಸರ್ವಾನುಮತದಿಂದ ಪ್ರಚಂಡ ಹರ್ಷಧ್ವನಿಗಳ ನಡುವೆ ಅಂಗೀಕರಿಸಿತು.]

### ೩. ನಿರಾಸೆ——>ನಿರಾಶೆ——>ನಿರಾಷೆ: ಇವುಗಳ ಬೆಳೆವಣಿಗೆ

ಪ್ರಜ್ವಲಿಸುವ ಅಗ್ನಿಯ ಮೇಲೆ ಕಬ್ಬಿಣದ ಬಾಣಲೆಯನ್ನಿಟ್ಟು, ಅದರಲ್ಲಿ ಎಣ್ಣೆಯನ್ನು ಹಾಕಿದರೆ, ಅದು ಕುದಿಯುವುದು. ಆ ಕುದಿಯುವ ಎಣ್ಣೆಯಲ್ಲಿ ಹಪ್ಪಳ ಸಂಡಿಗೆಗಳನ್ನು ಹಾಕಿದರೆ, ಅವು ಹಿಗ್ಗಿ ಅರಳಿ ಹಿರಿದಾಗುತ್ತವೆ—

ಇದು ದೃಷ್ಟಾಂತ.

ಅಗ್ನಿಯೆಂಬುದು ಯೌವನ. ಕಬ್ಬಿಣದ ಬಾಣಲೆಯೆಂಬುದು ಮುಖ. ಅದರೊಳಗಿನ ಎಣ್ಣೆಯು ಮುಖದೊಳಗಿನ ರಕ್ತ. ಮೇಲುತುಟಿಯ ರೋಮವಿಶೇಷವೇ ಹಪ್ಪಳ, ಸಂಡಿಗೆ—

ಇದು ವಿವರಣೆ.

ಪ್ರಜ್ವಲನವು ಅಗ್ನಿಯೌವನಗಳಿಗೂ, ಆಕರತ್ವವು ಬಾಣಲೆಮುಖಗಳಿಗೂ, ಕುದಿಯುವಿಕೆಯು ಎಣ್ಣೆರಕ್ತಗಳಿಗೂ, ಹಿಗ್ಗಿ ಅರಳಿ ಹಿರಿದಾಗುವಿಕೆಯು ಮೇಲುತುಟಿಯ ರೋಮವಿಶೇಷ ಹಪ್ಪಳ ಸಂಡಿಗೆಗಳಿಗೂ—

ಸಮಾನಧರ್ಮ.

**ಇದು ನಿರಾಸೆ——>ನಿರಾಶೆ——>ನಿರಾಷೆ:** ಇವುಗಳ ಬೆಳವಳಿಗೆಯ ರಹಸ್ಯ.

(ಇತರ ಭಾಷಣಗಳಿಗೆ ' ಹಾಳೂರ ಹಳದಿಯ ಹಾಳೆ ' ನೋಡಿ)

## ಅಧ್ಯಕ್ಷರ ಅಂತರಭಾಷಣ

(ಈ ವೇಳೆಗೆ ಅಧ್ಯಕ್ಷರು ಅನಿರೀಕ್ಷಿತವಾಗಿ ಹಾಳೂರಿಗೆ ಹತ್ತೊಂಬತ್ತು ಮೈಲಿ ದೂರದಲ್ಲಿರುವ ಅಂತರಪುರಕ್ಕೆ ಕಾರ್ಯಾಂತರದಿಂದ ಹೋಗಲೇಬೇಕಾಗಿ ಬಂದದ್ದರಿಂದಲೂ ಹಾಳೂರಿನಿಂದ ಅಂತರಪುರಕ್ಕೆ ಬಸ್ಸು ತಿಂಗಳಿಗೆ ಮೂರಾವರ್ತಿ ಮಾತ್ರ ಓಡಾಡುವುದರಿಂದಲೂ ಅಧ್ಯಕ್ಷರು ತಮ್ಮ ನಿರ್ಗಮನಕ್ಕೆ ವಿಷಾದವನ್ನು ಸೂಚಿಸಿ, ಹಳ್ಳಿಗಾಡುಗಳಲ್ಲಿ ಪ್ರಯಾಣಕ್ಕಿರುವ ತೊಂದರೆಗಳನ್ನು ಕುರಿತು ಕೂಲಂಕಷವಾಗಿ ವಿಚಾರಮಾಡಿ ಶ್ಲಾಘ್ಯವಾದ ದೀರ್ಘಭಾಷಣವನ್ನು ಉಜ್ವಲವಾಗಿ ಅಪ್ಪಣೆ ಕೊಡಿಸಿ ಬೈಲಾಪುರದ ಬೃಹಸ್ಪತ್ಯಾಶ್ರಮದ "ಭೃಗು" ಎಂಬವರನ್ನು ತಮ್ಮ ಸ್ಥಾನಕ್ಕೆ ನೇಮಿಸಿ ಅಧ್ಯಕ್ಷಭಾಷಣವನ್ನು ಮುಂದುವರಿಸುವಂತೆ ಪ್ರಾರ್ಥಿಸಿ ನಿರ್ಗಮಿಸಿದರು.)

## "ಭೃಗು" ಅಧ್ಯಕ್ಷರ ಭಾಷಣದ ಮುಖ್ಯಾಂಶಗಳು

[ಅಧ್ಯಕ್ಷರು ಅಧ್ಯಕ್ಷಪೀಠಕ್ಕೆ ತಮ್ಮ ಅನರ್ಹತೆಯನ್ನೂ ತಮಗೆ ಈ ಗೌರವ ಬರಲು ಕಾರಣರಾದ ಪೂಜ್ಯ ಪೂರ್ವಾಧ್ಯಕ್ಷರಿಗೆ ಕೃತಜ್ಞತೆಯನ್ನೂ ಹಿಂದಿನವರು ಹೇಳಬೇಕಾದುದನ್ನೆಲ್ಲ ಆಗಲೇ ಹೇಳಿಬಿಟ್ಟಿರುವುದರಿಂದ ತಾವೇನೂ ಹೇಳಲುಳಿದಿಲ್ಲವೆಂಬುದನ್ನೂ ಹೃದಯಂಗಮವಾಗಿ ವರ್ಣಿಸಿ ವಿವರಿಸಿ, ಹಂಸಕ್ಷೀರನ್ಯಾಯವನ್ನು ಸಭಿಕರಿಗೆ ಶ್ರುತಪಡಿಸಿ, ತಮ್ಮ ಉಜ್ವಲವಾದ ಭಾಷಣವನ್ನು ಹೀಗೆ ಅಪ್ಪಣೆ ಕೊಡಿಸಿದರು. ಇದು ಅದರ ಸಾರಾಂಶ.]

ಈ ದಿವಸ ನಾವು 'ಮಹಾಕವಿ ಪುರುಷ ಸರಸ್ವತಿ'ಯ ಜಯಂತಿಯನ್ನು ನಡಸಲು ಸೇರಿದ್ದೇವೆ. ಈ 'ಮಹಾಕವಿ'ಯೆಂಬ ಬಿರುದು ಸರ್ವಜನ ಸುಲಭವಲ್ಲ. ಕನ್ನಡದಲ್ಲಿ ಮೊದಲ 'ಮಹಾಕವಿ'ಯೆಂದರೆ ಈತನೇ. ಇವನನಂತರ ಬಂದ ಮಹಾಕವಿಯು ತಮ್ಮೆಲ್ಲರಿಗೂ ಚಿರಪರಿಚಿತನಾದ ಪಂಪ. ಪಂಪನು ಎರಡು ಗ್ರಂಥಗಳನ್ನು ಬರೆದ. ಅವುಗಳಲ್ಲಿ ಎರಡನೆಯದಾದ 'ವಿಕ್ರಮಾರ್ಜುನ ವಿಜಯ'ದಲ್ಲಿ ಭೀಮದುರ್ಯೋಧನರ ಗದಾಯುದ್ಧವನ್ನು ಎಂಠತ್ತು ಪದ್ಯಗಳಲ್ಲಿ ವರ್ಣಿಸಿದ್ದಾನೆ. ಅದನ್ನು ಆಧರಿಸಿ ರನ್ನನು ತನ್ನ 'ಗದಾಯುದ್ಧ'ದಲ್ಲಿ ಕುಸುರಿ ಕೆಲಸದ ಪರಾಕಾಷ್ಠೆಯನ್ನು ಪ್ರದರ್ಶಿಸಿದ್ದಾನೆ. ಕುಸುರಿ ಕೆಲಸದ ಪರಾಕಾಷ್ಠೆಯನ್ನು ಪುನಃ ಕಾಣಬೇಕಾದರೆ, ನೀವು ಬೇಲೂರಿನ ಶಿಲಾಬಾಲಿಕೆಯರನ್ನು ನೋಡಬೇಕು. ಬೇಲೂರು ಇರುವುದು ಹಾಸನ ಡಿಸ್ಟ್ರಿಕ್ಟಿನಲ್ಲಿ. ಅದೇ ಡಿಸ್ಟ್ರಿಕ್ಟಿನ ಚೆನ್ನರಾಯಪಟ್ಟಣ ತಾಲ್ಲೂಕಿನ ಶ್ರವಣಬೆಳುಗೊಳ ಗ್ರಾಮದಲ್ಲಿ ಜಗತ್ಪ್ರಸಿದ್ಧವಾದ ಶ್ರೀ ಗೋಮಟೇಶ್ವರ ವಿಗ್ರಹವಿದೆ. ಈ ಭವ್ಯಮೂರ್ತಿಯನ್ನೆತ್ತಿಸಿದವನು ಶ್ರೀ ಚಾವುಂಡರಾಯ. ಈತನು ಗಂಗರ ಮಂತ್ರಿಯಾಗಿದ್ದನು. ಆ ಕಾಲದಲ್ಲಿ ತಲಕಾಡು ಗಂಗರ ರಾಜಧಾನಿಯಾಗಿತ್ತು. ಆಗಲೂ ತಲಕಾಡು ಕಾವೇರೀ ನದಿಯ ದಡದಲ್ಲಿತ್ತು. ಈ ಕಾವೇರಿಯ ಜನ್ಮಸ್ಥಾನವು ಭಾಗಮಂಡಲವೆಂದು ನೀವು ಭೂಗೋಳದಲ್ಲಿ ಓದಿರಬಹುದು. ಭಾಗಮಂಡಲವೆಂಬುದು ಉರಮಂಡಲ ಕೊಳಕುಮಂಡಲಗಳಂತೆ ಒಂದು ಜಾತಿಯ ಹಾವಲ್ಲ. (ನಗು.) ಏಕೆಂದರೆ, ಹಿಂದೆ ಕೊಡಗರು ಹೆಬ್ಬಾವುಗಳಿಂದ ಕವಣೆ ಬೀಸುತ್ತಿದ್ದರಂತೆ. ಕವಣೆ ಬೀಸುವುದೆಂದರೆ ಈಗ ಎಷ್ಟೋ ಜನಕ್ಕೆ ಅರ್ಥವೇ ಆಗುವುದಿಲ್ಲ. ಹೀಗೆಯೇ ನಮ್ಮ ಅನೇಕ ಪ್ರಾಚೀನ ವ್ಯವಹಾರಗಳು ಪಿಲವಾಗುತ್ತಿವೆ. ಬಲ್ಗುಡಾರಿಗುಡುಗುಡು, ಗಣೇಶನ ಆಟ, ಟೋಪಿ ಆಟ—ಎಂದರೆ ಈಗಿನ ಹುಡುಗರಿಗೆ ಏನಾದರೂ ಕಲ್ಪನೆಯಾಗುತ್ತದೆಯೇ?

ಇಲ್ಲ. ಇಂತಹ ವಿಷಯಗಳ ಪರಿಚಯವೇ ಇಲ್ಲದವರಿಗೆ ಕವಣೆ ಬೀಸುವುದೆಂದರೆ ಹೇಗೆ ತಿಳಿಸುವುದು? ಈಗಿನವರು ಕವಣೆಗೆ ಹಗ್ಗ ಉಪಯೋಗಿಸುವಂತೆ ಹಿಂದಿನ ಕೊಡಗರು ಹೆಬ್ಬಾವನ್ನು ಉಪಯೋಗಿಸುತ್ತಿದ್ದರಂತೆ. ಹೆಬ್ಬಾವು ಹಾವಿನ ಜಾತಿಗೆ ಸೇರಿದಂತೆ ಅದೇ ಹಾವುಜಾತಿಯ ಉರಿಮಂಡಲ ಕೊಳಕುಮಂಡಲಗಳ ಹೆಸರನ್ನು ಕೇಳಿದವರಿಗೆ ಭಾಗಮಂಡಲವೆಂಬ ಹೆಸರು ನೆನಪಾಗಲೂ ಸಾಕು. ಇಲ್ಲಿಯೇ ಕಾವೇರಿ ಹುಟ್ಟುವುದೆಂದು ಭೂಗೋಳವನ್ನು ಓದಿದವರು ಬಲ್ಲರು. ಅದರಂತೆಯೇ ಚರಿತ್ರೆಯನ್ನು ಓದಿದವರು ಈ ಕಾವೇರೀ ನದಿಯ ದಡದಲ್ಲಿರುವ ತಲಕಾಡು ಹಿಂದಿನ ಕಾಲಕ್ಕೆ ಗಂಗರ ರಾಜಧಾನಿಯಾಗಿತ್ತೆಂದೂ ಬಲ್ಲರು. ಆ ಕಾಲದಲ್ಲಿ ಗಂಗರಿಗೆ ಶ್ರೀ ಚಾವುಂಡ ರಾಯನೆಂಬವನು ಮಂತ್ರಿಯಾಗಿದ್ದನು. ಈತನು ಶ್ರವಣಬೆಳುಗೊಳ ಗ್ರಾಮದ ಶ್ರೀ ಗೋಮಟೇಶ್ವರ ಮೂರ್ತಿಯನ್ನು ಮಾಡಿಸಿದನು. ಈ ಶ್ರವಣಬೆಳುಗೊಳವು ಹಾಸನ ಡಿಸ್ಟ್ರಿಕ್ಟಿನ ಚೆನ್ನರಾಯಪಟ್ಟಣ ತಾಲ್ಲೂಕಿನಲ್ಲಿದೆ. ಇದೇ ಹಾಸನ ಡಿಸ್ಟ್ರಿಕ್ಟಿನಲ್ಲಿ ಬೇಲೂರಿದೆ. ಬೇಲೂರಿನ ದೇವಾಲಯಗಳು ಜಗತ್ಪ್ರಸಿದ್ಧವಾದವು. ಅಲ್ಲಿನ ಶಿಲಾಬಾಲಿಕೆಯರಲ್ಲಿ ಕಂಡುಬರುವ ಕುಸುರಿ ಕೆಲಸದ ನೈಪುಣ್ಯವು ರನ್ನನ 'ಗದಾಯುದ್ಧ'ದ ಕುಸುರಿ ಕೆಲಸವನ್ನು ನೆನಪಿಗೆ ತರುವುದು. ಈ ರನ್ನನು ತನ್ನ 'ಗದಾಯುದ್ಧ'ವನ್ನು ರಚಿಸಲು 'ವಿಕ್ರಮಾರ್ಜುನ ವಿಜಯ'ದ ಸಹಾಯಪಡೆದನು. ಇದನ್ನು ಬರೆದವನು ಪಂಪ. ಈತನೇ ಈಗ ತಿಳಿದಿರುವ ಮಟ್ಟಿಗೆ ಕನ್ನಡದ ಆದಿಕವಿ. ಈತನಿಗಿಂತ ನಾಲ್ಕು ಶತಮಾನ ಹಿಂದಿನವನಾದ ಮಹಾಕವಿ ಪುರುಷ ಸರಸ್ವತಿಯ ಜಯಂತಿಯನ್ನು ನೆರವೇರಿಸಲು ನಾವು ಇಲ್ಲಿ ಸೇರಿದ್ದೇವೆ, ನೆರವೇರಿಸಿದ್ದೇವೆ. ಈಗಾಗಲೇ ಬಹಳ ವೇಳಾತಿಕ್ರಮವಾಗಿರುವುದರಿಂದ ನನ್ನ ಒಣಭಾಷಣವನ್ನು ಮುಕ್ತಾಯಗೊಳಿಸುತ್ತೇನೆ. (ಹರ್ಷಧ್ವನಿಗಳು.)

## ಕಾರ್ಯದರ್ಶಿಗಳ ಉಪಸಂಹಾರ ಭಾಷಣ

[ಕಾರ್ಯದರ್ಶಿಗಳು ತಮ್ಮ ಸ್ವಂತ ವೆಚ್ಚದಿಂದ ತಮ್ಮ ಉಪಸಂಹಾರ ಭಾಷಣವನ್ನೂ ಕೃತಜ್ಞತೆಯ ಪಟ್ಟಿಯನ್ನೂ ಪ್ರತ್ಯೇಕವಾಗಿ ಅಚ್ಚುಮಾಡಿಸಿ ಪುಕ್ಕಟೆಯಾಗಿ ಹಂಚಿರುವುದರಿಂದ ಅದನ್ನು ಇಲ್ಲಿ ಕೊಡುವ ಆವಶ್ಯಕತೆ ಕಂಡುಬರುವುದಿಲ್ಲ.—ಸಂಪಾದಕ.]

## ಪುರುಷ ಸರಸ್ವತಿ ಪ್ರಶಸ್ತಿ ಮುಗಿಯಿತು

## ಮುಗಿಯಿತು

ಶ್ರೀ ಗಿರಿಜೆ ಸರಸತಿಯರಾಣ್ಮರ
ನೇಗಳುಂ ಬಿಡದೊಲಿಸಿ ಕಬ್ಬವ
ನಾಗುಮಾಡಿಯೆ ಪೇಳ್ದನೆಂಬಾ ಪುರಿಸ ಸರಸತಿಯ।
ಸೋಗಿಸಲಿ ಸಾಹಿತ್ಯ ಜೀವನ
ದೀಗಳಿನ ವಿಕೃತಿಗಳನತಿಗಳ
ಲಾಗ ಹಾಕಿಸುವೀ ಕೃತಿಯು (ಚಾಮರಸನೆಂದಂತೆ)॥

ಬಾಯ ನುಡಿಗಳ ಕೇಳಿ ಕಿವಿಯೊಳ
ಗಾಯೆನುತ ಪರಿಣಮಿಸಿ ಹೋಹ ವಿ
ಡಾಯವಲ್ಲಿದು ಪಂಕ್ತಿ ಪಂಕ್ತಿಯ ಹಿಂದೆ ನಡುನಡುವೆ।
ಕಾಯುತಿಹ ಕುಟುಕುಗಳ ನಗುವಿನು
ಪಾಯದುರು ಮೊಟುಕುಗಳ ಸೋರುವ
ಗಾಯಕುಪ್ಪಿನ ಚಿಟಿಕೆಗಳ ತಿಳಿಯದೆಯೆ ಕಣ್ಮುಚ್ಚಿ॥

ಕುರಿಗಳೋಪಾದಿಯಲಿ ಕಬ್ಬಿನ
ಹೊರಗಣೆಲೆಯನು ಮೇದಕಟ ಮೆಲು
ಕಿರಿವುತಲ್ಪಸುಖಕ್ಕೆ ಸೋಲದೆ ಕಬ್ಬಿನೊಳು ರಸವ।
ನೆರೆ ಸವಿವ ಗಜದಂತೆ ಚುಚ್ಚಿನ
ತೆರನ ತಿಳಿದೆಚ್ಚರಲುಬೇಕೆಂ
ದರಿವವರ ಕೈಯೆಡೆಯ ಮಾಡಿದೆನೀ ವಿಡಂಬನವ॥

ಓದುವವರೋದುವರು ಸಹಿಸದೆ
ಸೀದು ಸಿಡಿಮಿಡಿಗೊಂಡು ನಡುವಣ
ಬೀದಿಯಲಿ ಬೈದಿಡುವವರು ಬೈದಾಡುವರು ಬಿಡೆಲಾ।
ವೇದನಾಲ್ಕರ ಪಿರಿಯ ಬೊಮ್ಮನ
ಮೇದಿನಿಯ ಮೇಲೆತ್ತಿದವನನ
ನಾದಿಮೂರುತಿ ಶಿವನ ನೆನೆಯುತೆ ನುಡಿದು ಮುಗಿಸಿದೆನು॥



PRINTED AT THE WESLEY PRESS AND PUBLISHING HOUSE, MYSORE CITY.